# ಆಧುನಿಕ ಕನ್ನಡ ಸಂಸ್ಕೃತಿ ಚಿಂತನೆಯಲ್ಲಿ ಕೋಮುವಾದದ ವಿಮರ್ಶೆ

## ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

೨೦೦೭

ಮಾರ್ಗದರ್ಶಕರು
**ಡಾ. ನಟರಾಜ್ ಹುಳಿಯಾರ್**
ಇಂಗ್ಲಿಷ್ ಅಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ, ಬೆಂಗಳೂರು-೫೬೦ ೦೫೬

ಸಂಶೋಧನಾ ವಿದ್ಯಾರ್ಥಿ
**ಜಯಶಂಕರ ಎಂ.**



**ಕಾವ್ಯ ಮಂಡಲ**
(ಹಂಪಿಯು ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)
ನಂ. ೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು-೫೬೦ ೦೦೪

606

## ಮಾರ್ಗದರ್ಶಕರ ಪ್ರಮಾಣ ಪತ್ರ

ಜಯಶಂಕರ ಎಂ. ಇವರು **"ಆಧುನಿಕ ಕನ್ನಡ ಸಂಸ್ಕೃತಿ ಚಿಂತನೆಯಲ್ಲಿ ಕೋಮುವಾದದ ವಿಮರ್ಶೆ"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ, ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರು

**ಡಾ. ನಟರಾಜ್ ಹುಳಿಯಾರ್**
ಇಂಗ್ಲಿಷ್ ಅಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ, ಬೆಂಗಳೂರು-೫೬೦೦೫೬

ದಿನಾಂಕ : 5-10-2007
ಸ್ಥಳ : ಬೆಂಗಳೂರು

606

## ದೃಢೀಕರಣ ಪತ್ರ

**"ಆಧುನಿಕ ಕನ್ನಡ ಸಂಸ್ಕೃತಿ ಚಿಂತನೆಯಲ್ಲಿ ಕೋಮುವಾದದ ವಿಮರ್ಶೆ"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ಸ್ವತಂತ್ರ ಅಧ್ಯಯನದ ಮೂಲಕ, ಡಾ. ನಟರಾಜ್ ಹುಳಿಯಾರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ, ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸಂಶೋಧಕ
**(ಜಯಶಂಕರ ಎಂ.)**

ದಿನಾಂಕ : 5·10·2007
ಸ್ಥಳ : ಬೆಂಗಳೂರು

# ಪರಿವಿಡಿ

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಧರ್ಮವೆಂದರೆ ಸಮಷ್ಟಿಯನ್ನೂ ಧಾರಣಮಾಡಿಕೊಳ್ಳುವ, ತಾವೂ ಬದುಕುತ್ತಾ ಇತರರನ್ನೂ ಬದುಕಗೊಡುವ ಒಂದು ಮನೋಧರ್ಮವೆಂದು ವ್ಯಾಸ ಮಹರ್ಷಿ ಹೇಳಿದ್ದಾನೆ. ವ್ಯಾಸನ ಪ್ರಕಾರ ಪ್ರಜೆಗಳನ್ನು ಮಾತ್ರವಲ್ಲದೆ ಸಕಲ ಸ್ಥಾವರ ಜಂಗಮರೂಪಿಗಳೆಲ್ಲವನ್ನೂ ಒಳಗೊಳ್ಳುವ ಹಾಗೂ ಸರ್ವವನ್ನು ಧಾರಣಮಾಡಿಕೊಳ್ಳುವ ಸಾಧನವೇ ಧರ್ಮ. ಇದು ಮಾನವ ಸ್ವಯಂಶಿಸ್ತಿನಿಂದ ರೂಪಿಸಿಕೊಳ್ಳಬೇಕಾಗಿರುವಂಥದ್ದು. ಈ ರೀತಿಯಾಗಿ ಸಮಸ್ತವನ್ನು ಹಿಡಿದಿಡುವ ಒಳಸೂತ್ರವಾಗಿದ್ದ ಧರ್ಮ ಕ್ರಮೇಣ ಮತಧರ್ಮವಾಗುತ್ತ ಸಮಷ್ಟಿ ಪ್ರಜ್ಞೆಯನ್ನು ಭಗ್ನಗೊಳಿಸುವ, ಮನಸ್ಸುಗಳನ್ನು ಒಡೆದು ಚೂರುಮಾಡುವ ಪ್ರಬಲ ಸಾಧನವಾಗಿ ಮಾರ್ಪಾಡಾಗತೊಡಗಿತು. ಈ ಮತಧರ್ಮನಿಷ್ಠವಾದ ಆಲೋಚನೆಗಳು ಮಾನವವಿರೋಧಿ ಧೋರಣೆಗಳಾಗುತ್ತಾ, ಸಮಷ್ಟಿಯ ಒಳಗೇ ಕೋಮುವಾದಿ ಆಶಯಗಳನ್ನು ಪ್ರಚೋದಿಸುತ್ತಾ ಬೆಳೆದವು. ಧರ್ಮದ ಈ ಅಪಕಲ್ಪನೆ ಲೋಕವನ್ನು ಕೋಮುಕೇಂದ್ರಿತವಾಗಿಯೇ ಕಾಣುವ ಕಣ್ಣನ್ನು ಪಡೆದ ಸಮೂಹವೊಂದನ್ನು ಸೃಷ್ಟಿಸುತ್ತಾ ಸಾಗಿ ಬಂದಿತು.

ಕದಡಿ ಬದುಕುವ ನೀತಿಯನ್ನು ಒಂದು ಪ್ರಮುಖ ರಾಜಕೀಯ ಹತಾರವನ್ನಾಗಿ ಮಾಡಿಕೊಂಡು ಭಾರತದಲ್ಲಿ ತಮ್ಮ ಅಧಿಕಾರವನ್ನು ಬಲಗೊಳಿಸಿಕೊಳ್ಳಲು ಹಾಗೂ ವಿಸ್ತರಿಸಿಕೊಳ್ಳಲು ತೊಡಗಿದ ವಸಾಹತುಶಾಹಿಯ ಆಳ್ವಿಕೆಯ ಕಾಲದಲ್ಲಿಯೇ ಗರ್ಭಕಟ್ಟಿಕೊಳ್ಳತೊಡಗಿದ ಕೋಮುವಾದ ಎಂಬ ಒಂದು ಮನೋಧರ್ಮ, ಭಾರತ ಸ್ವಾತಂತ್ರ್ಯ ಪಡೆದಾಗಲೇ ಮಾನವವಿರೋಧಿ ಧೋರಣೆಯಾಗಿ ಬೆಳೆಯತೊಡಗಿತು. ಸ್ವಾತಂತ್ರ್ಯೋತ್ತರ ಭಾರತದ ಚಲನೆಯಲ್ಲಿ ತನ್ನ ಕ್ರೌರ್ಯವನ್ನು ವಿಸ್ತರಿಸಿಕೊಳ್ಳತೊಡಗಿತು. ಕ್ರಮೇಣ ಒಂದು ಜೀವವಿರೋಧಿಯಾದ ಫ್ಯಾಸಿಸ್ಟ್ ಶಕ್ತಿಯಾಗಿ ರೂಪ ಪಡೆಯಿತು.

ಇದೇ ಸಂದರ್ಭದಲ್ಲಿ ಕೆಲವು ಸಾಂಸ್ಕೃತಿಕ ಹಾಗೂ ರಾಜಕೀಯ ಸಂಘಟನೆಗಳು ಕೋಮುವಾದವನ್ನು ತಮ್ಮ ವಿಸ್ತರಣೆಯ ತಳಹದಿಯನ್ನಾಗಿಸಿಕೊಂಡವು. ಅಧಿಕಾರ ದಾಹದಿಂದ ಅದನ್ನು ಚುನಾವಣಾ ಪ್ರಚಾರದ ಸಾಧನವನ್ನಾಗಿ ಬಳಸಿಕೊಂಡವು. ಅವು ಜನರಲ್ಲಿ ಕೋಮುಭಾವನೆಯನ್ನು ಕೆರಳಿಸಿ, ಮುಗ್ಧವಾದ ಮನಸ್ಸುಗಳನ್ನು ಪ್ರಕ್ಷುಬ್ಧಗೊಳಿಸುತ್ತಾ ಮತಬ್ಯಾಂಕ್‌ಗಳನ್ನು ನಿರ್ಮಿಸಿದಂತೆಲ್ಲ ಕೋಮುವಾದದ ಕ್ರೌರ್ಯಗಳು ಭೀಕರವಾಗುತ್ತಾ ಸಾಗಿದವು.

ಹಿಂದುತ್ವ ಎಂಬ ರಾಜಕೀಯಾಧಿಕಾರದ ಹೊಂಚು ಬೆರೆತ ಧರ್ಮದ ಕಲ್ಪನೆಯನ್ನು ಬಿತ್ತಿದ ಹಿಂದೂ ಮತೀಯವಾದಿಗಳು ಖಡ್ಗ, ತ್ರಿಶೂಲಗಳನ್ನು ತೋರಿಸುತ್ತಾ ನಮ್ಮ ಸಾಂಸ್ಕೃತಿಕ ನಾಯಕರನ್ನು, ಪಾರಂಪರಿಕ ಸ್ಮಾರಕಗಳನ್ನು, ಕಟ್ಟಡಗಳನ್ನು ಮತೀಯ ತೆಕ್ಕೆಯೊಳಗಿಟ್ಟರು. ರಾಮ ಮತ್ತು ಅಯೋಧ್ಯೆಯನ್ನು ರಾಷ್ಟ್ರೀಯತೆಯ ಪ್ರಶ್ನೆಗಳೊಂದಿಗೆ ಬೆರೆಸಿ, ಅವನ್ನು ಹಿಂಸೆಯ ಪ್ರತಿಮೆಗಳನ್ನಾಗಿಸಿದರು. ಇಂಥದೇ ಪೂರ್ವಗ್ರಹಗಳನ್ನು ಬಾಬಾಬುಡನ್‌ಗಿರಿಯಂಥ ಶುದ್ಧ ಸಾಮರಸ್ಯದ ನೆಲೆಗೂ ದಾಟಿಸಿಬಿಟ್ಟರು. ಇವರ ಎದುರಿಗೆ ಇನ್ನಿತರ ಬಗೆಯ ಧಾರ್ಮಿಕ ಮೂಲಭೂತವಾದಗಳು ಬೆಳೆಯತೊಡಗಿದವು. ಈ ಬೆಳವಣಿಗೆಯ ಭಾಗವೇ ಆದ ಇಸ್ಲಾಮಿಕ್ ಮತೀಯವಾದಿಗಳು ಧರ್ಮಯುದ್ಧ ಎಂಬ ಹೆಸರಿನಲ್ಲಿ ಪ್ರತಿಹಿಂಸೆಯಲ್ಲಿ ನಿರತರಾದರು.

ಯಾವುದೇ ಕಾಲದಲ್ಲಿ ಮಾನವವಿರೋಧಿ ಕ್ರಿಯೆ ಮತ್ತು ಆಲೋಚನೆಗಳು ಬೆಳೆದಂತೆಲ್ಲ ಅವುಗಳನ್ನು ವಿರೋಧಿಸುವ ಮಾನವೀಯ ಚಿಂತನೆಗಳು ಅಷ್ಟೇ ಸಹಜವಾಗಿ ಹುಟ್ಟಿಕೊಳ್ಳುತ್ತವೆ. ಜೀವವಿರೋಧಿಯಾದ ನೆಲೆಗಳ ನಡುವೆಯೇ ಜೀವಮುಖಿಯಾದ ಚೈತನ್ಯಗಳು ಬೆಳೆಯಲಾರಂಭಿಸುತ್ತವೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಆಳವಾಗಿ ಬೇರುಬಿಡುತ್ತಾ ಬೆಳೆದ ಕೋಮುವಾದಕ್ಕೆ ಎದುರಾಗಿ ಮತೀಯ ಸಾಮರಸ್ಯವನ್ನು ಸಾರುವ ಮಾನವೀಯ ಚಿಂತನೆಗಳು ಬೆಳೆದಿವೆ. ಮತೀಯವಾದಿಗಳು ಮನುಷ್ಯರ ನಡುವೆ ಬಿರುಕನ್ನು ಮೂಡಿಸಿದರೆ, ಎಲ್ಲಾ ಧರ್ಮಗಳಿಂದ ಬಂದ ಪ್ರಗತಿಪರ ಚಿಂತಕರಿಂದ ರೂಪುಗೊಂಡ ಸೆಕ್ಯುಲರ್ ಹಾಗೂ ಸಾಮರಸ್ಯವಾದೀ ಗುಂಪುಗಳು, ವ್ಯಕ್ತಿಗಳು ಒಡೆದ ಮನಸ್ಸುಗಳನ್ನು ಪರಸ್ಪರ ಬೆಸೆಯುತ್ತಾ ಬಂದಿವೆ. ಹೀಗೆ ಸಾಮರಸ್ಯದ ನೆಲೆಯಲ್ಲಿ ಆಲೋಚಿಸುತ್ತಾ ಬೆಳೆಯುತ್ತಿರುವ ಹಲವು ಚಿಂತನಾ ಪರಂಪರೆಗಳು ಆಧುನಿಕ ಕನ್ನಡ ಸಂಸ್ಕೃತಿ ಚಿಂತನೆಯಲ್ಲಿವೆ. ಧರ್ಮ ಎಂಬುದು ಮಾನವರನ್ನು ಗುಂಪು ಗುಂಪಾಗಿ ವಿಂಗಡಿಸುವ ಸಾಧನವಲ್ಲ; ಎಲ್ಲ ತರತಮಗಳನ್ನು ದಾಟಿ ಎಲ್ಲರನ್ನೂ ಒಂದುಗೂಡಿಸುವ ಮಾನವೀಯ ಚೇತನ ಎಂದು ನಂಬಿರುವ ಈ ಚಿಂತನಾ ಕ್ರಮಗಳು ಕೋಮುವಾದವನ್ನು ಭಿನ್ನಭಿನ್ನವಾದ ನೆಲೆಗಳಿಂದ ಅರ್ಥೈಸುತ್ತಾ ಸಾಗಿವೆ.

ಕೋಮುವಾದವನ್ನೇ ಪ್ರಣಾಳಿಕೆ ಮಾಡಿಕೊಂಡ ರಾಜಕೀಯ ಪಕ್ಷಗಳನ್ನು ವಿರೋಧಿಸಲು ಇನ್ನಿತರ ರಾಜಕೀಯ ಪಕ್ಷಗಳು ತೆಳುವಾದ ಆಲೋಚನೆಗಳಿಂದ ರೂಪಿಸಿಕೊಂಡ ಕೋಮುವಿರೋಧಿ ಕಾರ್ಯಕ್ರಮಗಳು ಒಂದೆಡೆ ಇವೆ. ಅದರ ಜೊತೆಗೇ ಕೆಲವು ರಾಜಕೀಯ ಪಕ್ಷಗಳ ಖಚಿತ ಸೈದ್ಧಾಂತಿಕ ವಿರೋಧಗಳೂ ಇವೆ. ಹಾಗೆಯೇ ಬರಹಗಾರರು, ಚಿಂತಕರು, ಪ್ರಗತಿಪರ ಚಳವಳಿಗಳ ನಾಯಕರು, ಧಾರ್ಮಿಕ ನಾಯಕರು ಹಾಗೂ ಜನಪರ ಸಂಘಟನೆಗಳು ಆಳವಾದ ಸಾಂಸ್ಕೃತಿಕ ಎಚ್ಚರದಿಂದ ರೂಪಿಸಿಕೊಂಡ ಮತ್ತೊಂದು ಬಗೆಯ ಚಿಂತನೆಗಳೂ ಇವೆ. ಕನ್ನಡ ಸಂಸ್ಕೃತಿಯಲ್ಲಿ ಕೆ.ವಿ. ಸುಬ್ಬಣ್ಣ, ಪಿ. ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಡಿ.ಆರ್. ನಾಗರಾಜ್, ಯು.ಆರ್. ಅನಂತಮೂರ್ತಿ, ಎಂ.ಡಿ. ನಂಜುಂಡಸ್ವಾಮಿ, ಕೆ. ರಾಮದಾಸ್, ಜಿ.ಕೆ. ಗೋವಿಂದ ರಾವ್, ಜಿ. ರಾಮಕೃಷ್ಣ,

ಎಸ್. ಚಂದ್ರಶೇಖರ್, ಜಿ. ರಾಜಶೇಖರ್, ಕೆ. ಫಣಿರಾಜ್, ರಹಮತ್ ತರೀಕೆರೆ, ಪಟ್ಟಾಭಿರಾಮ ಸೋಮಯಾಜಿ, ಬಾನು ಮುಷ್ತಾಕ್ ಮೊದಲಾದವರು ಈ ಬಗೆಯ ಸಾಂಸ್ಕೃತಿಕ ಎಚ್ಚರ ಹಾಗೂ ಮಾನವೀಯ ಅರಿವುಗಳಿಂದ ಕಾಲಕಾಲಕ್ಕೆ ಕೋಮುವಾದವನ್ನು ವಿರೋಧಿಸುತ್ತಾ ಬಂದವರು. ಇವರ ನಡುವೆಯೇ ಶಿವಮೂರ್ತಿ ಮುರುಘರಾಜೇಂದ್ರ ಸ್ವಾಮೀಜಿ, ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, ವೀರಭದ್ರ ಚನ್ನಮಲ್ಲ ಸ್ವಾಮೀಜಿಗಳಂಥ ಶರಣರೂ ಧಾರ್ಮಿಕ ನೆಲೆಯಲ್ಲಿ ಕೋಮುವಾದವನ್ನು ಮುಖಾಮುಖಿಯಾಗುವ ಚಿಂತನಾ ಕ್ರಮವೊಂದನ್ನು ರೂಪಿಸುತ್ತಿದ್ದಾರೆ. ಅಲ್ಲದೆ ಕೋಮುಸಾಮರಸ್ಯವನ್ನೇ ತನ್ನ ಪ್ರಣಾಳಿಕೆಯನ್ನಾಗಿ ಮಾಡಿಕೊಂಡಿರುವ ಕರ್ನಾಟಕ ಕೋಮು ಸೌಹಾರ್ದ ವೇದಿಕೆ ಕೂಡ ಈ ದಿಸೆಯಲ್ಲಿ ತನ್ನದೇ ಆದ ಚಿಂತನೆ, ಹೋರಾಟ ಹಾಗೂ ಕಾರ್ಯಕ್ರಮಗಳನ್ನು ರೂಪಿಸುತ್ತಾ ಬಂದಿದೆ.

ಈ ವಿಭಿನ್ನ ಚಿಂತನೆಗಳು ಕೋಮು ಸಾಮರಸ್ಯವನ್ನೇ ಗುರಿಯನ್ನಾಗಿ ಮಾಡಿಕೊಂಡಿದ್ದರೂ, ಹಾಗೆ ಸಾಗುವಾಗ ಮತೀಯವಾದಿಗಳ ಹುನ್ನಾರಗಳು, ಆಕ್ರಮಣಗಳು, ಕ್ರೌರ್ಯಗಳನ್ನು ಹಲವು ನೆಲೆಗಳಿಂದ ವಿವರಿಸಿಕೊಳ್ಳುತ್ತವೆ. ಇವು ಕೋಮುವಾದದ ಹಿಂದಿರಬಹುದಾದ ರಾಜಕೀಯ ದಾಹವನ್ನು ಮಾತ್ರವಲ್ಲದೆ, ಅದರ ಆರ್ಥಿಕ, ಸಾಮಾಜಿಕ, ಚಾರಿತ್ರಿಕ, ಹಾಗೂ ಸಾಂಸ್ಕೃತಿಕ ಹಿತಾಸಕ್ತಿಗಳನ್ನು ಶೋಧಿಸುತ್ತವೆ. ಈ ಶೋಧನಾ ನೆಲೆಯಲ್ಲಿ ಹುಟ್ಟಿಕೊಳ್ಳುವ ಚಿಂತನೆಗಳ ಹಲವು ಮಾದರಿಗಳನ್ನೂ, ಅವುಗಳ ಧೋರಣೆ, ಆಶಯ ಹಾಗೂ ಅವು ಅಂತಿಮವಾಗಿ ತಲುಪುವ ನಿಲುವುಗಳ ಸ್ವರೂಪವನ್ನೂ ಕಂಡುಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ಅಧ್ಯಾಯ ೧

# ವಸಾಹತುಶಾಹಿ : ಧರ್ಮ ಮತ್ತು ಕೋಮುವಾದ

ನಾವು ಈಗ ಗ್ರಹಿಸಿರುವ ರೀತಿಯ ರಾಷ್ಟ್ರೀಯತೆಯ ಪರಿಕಲ್ಪನೆ ಐರೋಪ್ಯ ರಾಷ್ಟ್ರ ಪ್ರಭುತ್ವದ ಕಲ್ಪನೆಯಿಂದ ರೂಪುಗೊಂಡಂತೆಯೇ ಧರ್ಮದ ಮತೀಯರೂಪಿ ಕಲ್ಪನೆ ಕೂಡ ವಸಾಹತು ಕಾಲಘಟ್ಟದಲ್ಲಿ ಹುಟ್ಟಿಕೊಂಡದ್ದು ಎಂದು ಚರಿತ್ರಕಾರರು ವಾದಿಸುತ್ತಾರೆ. ಒಂದು ಪ್ರಭುತ್ವ, ಒಂದು ಧರ್ಮ, ಒಂದು ಭಾಷೆಯಿಂದ ರೂಪುಗೊಂಡ ಏಕಘನಾಕೃತಿಯ ಐರೋಪ್ಯ ಪ್ರಭುತ್ವವು ಭಾರತದ ಬಹುರೂಪಿ ಬದುಕನ್ನು ತನ್ನಂತೆಯೇ ಅಂದುಕೊಂಡು, ಗ್ರಹಿಸಿಕೊಳ್ಳಲಾರಂಭಿಸಿದ ಕಾಲದಲ್ಲಿ ನಿರ್ಮಾಣವಾಗತೊಡಗಿದ ಕಲ್ಪನೆ ಇದು. ರಾಷ್ಟ್ರೀಯತೆ ಎನ್ನುವ ಭೂತವನ್ನು ತಲೆಯಲ್ಲಿ ತುಂಬಿಕೊಂಡ ಆಧುನಿಕ ಭಾರತದ ಸಾಮಾನ್ಯ ಮನುಷ್ಯನೊಬ್ಬ ಉಗ್ರ ರಾಷ್ಟ್ರಪ್ರೇಮಿಯಾಗಿ ರೂಪುಗೊಂಡು ತಾನು ನೆಚ್ಚಿಕೊಂಡಿರುವ ರಾಷ್ಟ್ರೀಯತೆಯಗಾಗಿ ಏನು ಬೇಕಾದರೂ ಮಾಡಲು ಮುಂದಾಗುತ್ತಾನೆ. ಆದರಿವನು ತನ್ನ ರಾಷ್ಟ್ರದ ಒಳಗೇ ಇರುವ ವೈವಿಧ್ಯತೆಗಳನ್ನು, ಜಾತೀಯತೆ, ಅಸ್ಪೃಶ್ಯತೆಗಳಂಥ ಅಮಾನವೀಯ ಆಚರಣೆಗಳನ್ನು ಹಾಗೂ ಇನ್ನಿತರೆ ಮಾನವವಿರೋಧಿ ಹುಳುಕುಗಳನ್ನು ಮರೆಯುತ್ತಿರುತ್ತಾನೆ. ಅನಂತಮೂರ್ತಿಯವರು ಹೇಳುವಂತೆ "ಇಂಗ್ಲಿಷ್‌ನಲ್ಲಿ ನೇಷನ್ ಸ್ಟೇಟ್ ಎನ್ನುತ್ತಾರಲ್ಲ ಅದರ ಹೆಸರಿನಲ್ಲಿ ಮನುಷ್ಯ ಕುಗ್ಗುತ್ತಾನೆ. ಸರಿ ತಪ್ಪುಗಳ ನೈತಿಕ ಪ್ರಜ್ಞೆಗಳನ್ನು ಕಳೆದುಕೊಂಡು 'ರಾಷ್ಟ್ರಪ್ರೇಮಿ'ಯಾಗಿಬಿಡುತ್ತಾನೆ".[೧] ಅನೇಕ ಕಿರುರಾಷ್ಟ್ರಗಳಿರುವ ಇಂಡಿಯಾದ ಸಂದರ್ಭದಲ್ಲಿ ಕರ್ನಾಟಕದಂಥ ಕಿರುರಾಷ್ಟ್ರಕ್ಕೆ ಹಾಗೂ ಇಂಥ ಅನೇಕ ಕಿರುರಾಷ್ಟ್ರಗಳನ್ನು ಒಗ್ಗೂಡಿಸಿರುವ ಭಾರತದ ರಾಷ್ಟ್ರೀಯತೆಗೆ ಏಕಕಾಲದಲ್ಲಿ ನಿಷ್ಠನಾಗಿರಬೇಕಾದ ದ್ವಂದ್ವದ ನಡುವೆಯೂ ಇಲ್ಲಿನ ಸಾಮಾನ್ಯ ಮನುಷ್ಯನೊಬ್ಬ ಸರಿ ತಪ್ಪುಗಳ ನೈತಿಕ ಪ್ರಜ್ಞೆಯನ್ನು ಕಳೆದುಕೊಳ್ಳುತ್ತಾನೆ.

### ೧.೧ ಭಾರತದ ನಿಜ ಚಹರೆ

ಅರಬರು, ಟರ್ಕರು, ಪರ್ಶಿಯನ್ನರು ಬರುವ ಮೊದಲಿನಿಂದಲೂ ಭಾರತ ಎಂದೂ ತನ್ನನ್ನು ಒಂದೇ ಭಾಷೆಯ, ಜಾತಿಯ, ಧರ್ಮದ, ಆಚರಣೆಯ, ನಂಬಿಕೆಯ, ಸಂಸ್ಕೃತಿಯ ಅಖಂಡ ಭೂಭಾಗ ಎಂದು ಪ್ರತಿನಿಧಿಸಿದ್ದಿಲ್ಲ. ಇಂಡಿಯಾ ಆರಂಭದಿಂದಲೂ ಹಲವು

ಭಾಷೆ, ನಂಬಿಕೆ, ಆಚರಣೆಗಳ ಮೂಲಕ ಸಾಗಿಬಂದ ಜನಸಮುದಾಯವಷ್ಟೇ. ಇಲ್ಲಿ ಮೌರ್ಯರು, ಶಕರು, ಕುಶಾನರು, ಜೈನರು, ಬೌದ್ಧರಿದ್ದರು. ಹಾಗೆಯೇ ವೈದಿಕ ಮತ್ತು ಅವೈದಿಕರಿದ್ದರು. ಈ ವೈದಿಕ ಜೀವನಕ್ರಮದ ಹಲವು ನಂಬಿಕೆ ಮತ್ತು ಆಚರಣೆಗಳಿಗೆ ಹತ್ತಿರವೇ ಇದ್ದ ಅವೈದಿಕರನ್ನು ಸೇರಿಸಿಕೊಂಡ ವೈದಿಕ ಬುದ್ಧಿಜೀವಿಗಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎನ್ನುವ ಚಾತುರ್ವರ್ಣ್ಯ ಪದ್ಧತಿಯನ್ನು ಹುಟ್ಟುಹಾಕಿದರು. ಹೀಗೆ ರೂಪುಗೊಂಡ ವರ್ಗ ವ್ಯವಸ್ಥೆಗೆ ವೈದಿಕರು ವೇದ, ಸ್ಮೃತಿಗಳನ್ನು ಆಧಾರವಾಗಿಟ್ಟುಕೊಂಡಿದ್ದು, ಅವುಗಳನ್ನು ಅಂತಿಮವಾಗಿ ತಮ್ಮ ಒಳಿತಿಗಾಗಿಯೇ ಬಗ್ಗಿಸಿಕೊಂಡಿದ್ದರು.

ಈ ವರ್ಗಗಳನ್ನು ಕ್ರಮವಾಗಿ ಪುರೋಹಿತ ವರ್ಗ, ರಕ್ಷಕ ವರ್ಗ, ವ್ಯಾಪಾರೀ ವರ್ಗ, ಸೇವಕ ವರ್ಗ ಎಂದು ಕರೆದುಯುವ ಅಂಬೇಡ್ಕರ್ ಈ ವರ್ಗಗಳೇ ಕಾಲಾಂತರದಲ್ಲಿ ಜಾತಿಗಳಾಗಿ ರೂಪುಗೊಳ್ಳುವ ಕ್ರಮವನ್ನು ಹೀಗೆ ಗ್ರಹಿಸಿದ್ದಾರೆ: 'ಈ ವರ್ಗ ವ್ಯವಸ್ಥೆಯಲ್ಲಿ ವ್ಯಕ್ತಿಗಳು ಅರ್ಹತೆಗಳಿಸಿಕೊಂಡಾಗ ತಮ್ಮ ವರ್ಗವನ್ನು ಬದಲಿಸಿಕೊಳ್ಳಬಹುದಿತ್ತು. ಆದ್ದರಿಂದಲೇ ವರ್ಗಗಳು ಅವರ ಉದ್ಯೋಗಗಳನ್ನು ಬದಲಿಸುತ್ತಿದ್ದವು. ಆದರೆ ಹಿಂದೂ ಇತಿಹಾಸದ ಒಂದು ಘಟ್ಟದಲ್ಲಿ ಪುರೋಹಿತ ವರ್ಗ ಸಾಮಾಜಿಕವಾಗಿ ತನ್ನನ್ನು ತಾನೇ ಇತರ ವರ್ಗಗಳಿಂದ ದೂರವಾಗಿಟ್ಟುಕೊಂಡಿತು. ತನ್ನ ಮುಚ್ಚಿದ ಬಾಗಿಲ ನೀತಿಯಿಂದಾಗಿ ತಾನೇ ಒಂದು ಜಾತಿಯಾಯಿತು. ಉಳಿದ ವರ್ಗಗಳು ಉದ್ಯೋಗದ ಸಾಮಾಜಿಕ ವಿಭಜನೆಯ ನಿಯಮಗಳಿಗನುಗುಣವಾಗಿ ಸಣ್ಣ ಹಾಗೂ ದೊಡ್ಡ ಗುಂಪುಗಳಾದವು. ವೈಶ್ಯ ಮತ್ತು ಶೂದ್ರ ವರ್ಗಗಳು ಇಂದಿನ ಅಸಂಖ್ಯಾತ ಜಾತಿಗಳ ಹುಟ್ಟಿಗೆ ಕಾರಣವಾದವು'.[೨] ಅರ್ಹತೆಗನುಗುಣವಾಗಿ ಉದ್ಯೋಗಗಳು ಮಾರ್ಪಾಡಾಗುತ್ತಿದ್ದ ಕಾಲಘಟ್ಟದಲ್ಲಿ ಪುರೋಹಿತ ವರ್ಗ ಆ ಪ್ರಕ್ರಿಯೆಯನ್ನೇ ಸ್ಥಗಿತಗೊಳಿಸಿ ತನ್ನನ್ನು ಮೇಲ್ಜಾತಿ ಎಂದು ಸ್ಥಾಪಿಸಿಕೊಂಡು ಇತರೆ ವರ್ಗಗಳು ಅದರ ಬಳಿಗೆ ಸುಳಿಯದಂತೆ ನಿರ್ಬಂಧಿಸಿಕೊಂಡಿತು. ಇವೆಲ್ಲವನ್ನು ಗಮನಿಸಿದರೆ ಶೂದ್ರ ಮತ್ತು ವೈಶ್ಯ ವರ್ಗಗಳು ಸಾಮರ್ಥ್ಯ ಮತ್ತು ಅವಕಾಶ ಇದ್ದಾಗ ಕ್ಷತ್ರಿಯರಾಗಿರಬಹುದೇನೊ. ಆದರೆ ಶೂದ್ರ, ವೈಶ್ಯ ಹಾಗೂ ಕ್ಷತ್ರಿಯರು ಸಾಮರ್ಥ್ಯವಿದ್ದರೂ, ಎಂದೂ ಪೌರೋಹಿತ್ಯವನ್ನು ಮಾಡಲಾಗಲೇ ಇಲ್ಲ! ಕಾಲಕ್ರಮೇಣ ಭಾರತ ವರ್ಗಗಳನ್ನು ಕಳೆದುಕೊಂಡು ಸಾವಿರಾರು ಜಾತಿ, ನೂರಾರು ಒಳಜಾತಿಗಳ ಸುಳಿಯಲ್ಲಿ ನರಳುತ್ತಾ ಸಾಗಿಬಂದಿದೆ.

ಹೀಗೆ ಭಾರತದಲ್ಲಿ ಹಲವು ಜಾತಿಯ, ಭಿನ್ನ ಕಸುಬಿನ, ಭಿನ್ನ ಭಿನ್ನ ನಂಬಿಕೆಯ ಜನಸಮೂಹಗಳು ನೆಲೆಸಿದ್ದವು. ಇವರೆಲ್ಲರನ್ನೂ ರಾಜಕೀಯವಾಗಿಯಾದರೂ ಒಗ್ಗೂಡಿಸುವ ಸಾಮ್ರಾಜ್ಯವೂ ಇರಲಿಲ್ಲ. ಭಾರತವನ್ನು ಏಕಕಾಲಕ್ಕೆ ಹಲವು ಸಾಮ್ರಾಜ್ಯಗಳು ಭಾಗ ಭಾಗವಾಗಿ ಆಳುತ್ತಿದ್ದು, ತಮ್ಮ ರಾಜ್ಯ ವಿಸ್ತರಣೆಗಾಗಿ ಪರಸ್ಪರ ದಾಳಿ ಮಾಡುತ್ತಾ ಸಾಗುತ್ತಿದ್ದವು. ಈ ದಾಳಿ ಪ್ರತಿದಾಳಿಯಲ್ಲಿ ಪ್ರತಿ ಬಾರಿಯೂ ಹೊಸ ರಾಜ ಬಂದಾಗ ಇಡೀ ಜನ ಸಮುದಾಯ

ತಮ್ಮ ನಂಬಿಕೆ ಮತ್ತು ಆಚರಣೆಗಳನ್ನು ರಾಜನ ನಂಬಿಕೆ ಮತ್ತು ಆಚರಣೆಗಳಿಗೆ ಬದಲಾಯಿಸಿಕೊಳ್ಳುತ್ತಾ ಬಂದ ಉದಾಹರಣೆಗಳಿವೆ. ಬಹು ಮುಖ್ಯ ಮತ್ತು ಸೋಜಿಗದ ವಿಷಯ ಎಂದರೆ ಒಂದೇ ಕುಟುಂಬದಲ್ಲಿ ವಿಭಿನ್ನ ನಂಬಿಕೆಯ ಸದಸ್ಯರಿದ್ದದ್ದು. ಬೌದ್ಧ ಪಂಗಡದ ಮೂಲದ ಸಂಪ್ರತಿ ಚಂದ್ರಗುಪ್ತನೇ ದಕ್ಷಿಣದ ಶ್ರವಣಬೆಳಗೊಳಕ್ಕೆ ಬಂದು ಜೈನ ಪಂಗಡವನ್ನು ಚಿಗುರಿಸುತ್ತಾನೆ. ಹೊಯ್ಸಳರ ವಿಷ್ಣುವರ್ಧನ ವೈಷ್ಣವನಾಗಿದ್ದರೆ, ಅವನ ಹೆಂಡತಿ ಶಾಂತಲಾ ಜೈನಳು; ಶಾಂತಲಾಳ ತಂದೆ ಶೈವನಾಗಿದ್ದ. ಇದು ಸಾಧ್ಯವಾಗಿದ್ದದ್ದು ಧರ್ಮ ನಂಬಿಕೆಯಾಗಿದ್ದರಿಂದಲೇ. ನಾನು ಬೌದ್ಧ ಮತ್ತು ಜೈನರನ್ನು ಧರ್ಮ ಅನ್ನದೆ 'ಪಂಗಡ' ಎಂದು ಈ ಮೇಲೆ ಕರೆದಿದ್ದೇನೆ. ಏಕೆಂದರೆ ಜೈನ ಮತ್ತು ಬೌದ್ಧರಿಗೂ ತಾವೊಂದು ಧರ್ಮ ಅನ್ನುವ ಪ್ರಜ್ಞೆ ಹುಟ್ಟಿದ್ದೇ 'ಹಿಂದೂ' ಎಂಬ ಧರ್ಮದ ಬಗೆಗಿನ ಐಡೆಂಟಿಟಿ ಮತ್ತು ಶ್ರೇಷ್ಠತೆಯ ಕಲ್ಪನೆ ರೂಪುಗೊಂಡ ನಂತರ. ಅಥವಾ ಇನ್ನೂ ಸ್ಪಷ್ಟವಾಗಿ ಗುರುತಿಸುವುದಾದರೆ ಬ್ರಿಟಿಷರು ಭಾರತದಲ್ಲಿ ತಮ್ಮನ್ನು ಕ್ರೈಸ್ತರು ಎಂದು ಒಂದು ಸ್ಪಷ್ಟ ಗೆರೆ ಇರುವ ಮತಧರ್ಮದೊಳಕ್ಕೆ ವರ್ಗೀಕರಿಸಿಕೊಳ್ಳಲಾರಂಭಿಸಿದ ನಂತರವೇ.

## ೧.೨ ಹಿಂದೂ ಎಂಬ ಅಸ್ಮಿತೆ

ಭಾರತದಲ್ಲಿ ಬಹುಸಂಸ್ಕೃತಿಗಳಿಗಿರುವಷ್ಟು ದೀರ್ಘವಾದ ಚರಿತ್ರೆ 'ಹಿಂದೂ' ಎಂಬ ಸಮುದಾಯಕ್ಕಿರಲಿ, ಪದಕ್ಕೂ ಇಲ್ಲ. ವಾಸ್ತವವಾಗಿ ಹಿಂದೂ ಎಂಬ ಪದವೇ ಭಾರತೀಯರು ರೂಪಿಸಿದ್ದಲ್ಲ. ರೋಮಿಲಾ ಥಾಪರ್ ಹೇಳುವಂತೆ "ಭಾರತಕ್ಕೆ ಸಂಬಂಧಿಸಿದ ಇಸ್ಲಾಮಿಕ್ ಪೂರ್ವ ಆಕರಗಳಲ್ಲಿ ಹಿಂದೂ ಎಂಬ ಪದ ಕಂಡುಬರುವುದೇ ಇಲ್ಲ. ಈ ಪದವನ್ನು ಮೊದಲು ಅರಬರು ಹಿಂದ್ (ಇಂಡಿಯಾ) ಭೂಮಿಯಲ್ಲಿ ವಾಸಿಸುತ್ತಿದ್ದ ಜನರಿಗೆ ಉಲ್ಲೇಖಿಸಿ ಬಳಸಿದರು. ಹಾಗಾಗಿ 'ಹಿಂದೂ' ಎಂಬ ಪರಿಕಲ್ಪನೆಯು ಹಿಂದೂಗಳಾಗಿದ್ದ ಜನರು ವಿಕಾಸಗೊಳಿಸಿದ ಹಾಗೂ ಬಳಸಿದ ಪರಿಕಲ್ಪನೆಯಲ್ಲವೇ ಅಲ್ಲ. ಇದೊಂದು ವಿದೇಶಿ ಪದ, ಇದನ್ನು 'ಹಿಂದೂ'ಗಳು ಎತ್ತಿಕೊಂಡು ಬಳಸಿಕೊಂಡರು. ಇಂದು ಯಾರನ್ನು ನಾವು ಹಿಂದೂ ಎಂದು ಕರೆಯುತ್ತೇವೊ ಅವರನ್ನು ಪುರಾತನ ಕಾಲದಲ್ಲಿ ಹಾಗೆಂದು ಗುರುತಿಸಲು ಆಗುತ್ತಲೇ ಇರಲಿಲ್ಲ. ಈ 'ಹಿಂದೂ' ಎಂಬುವನು ಗುಪ್ತ ಕಾಲಾವಧಿಯ ನಂತರದಲ್ಲಷ್ಟೇ. ಅಂದರೆ ಕ್ರಿ.ಶ. ೫ನೇ ಶತಮಾನದ ನಂತರ ಕಾಣಿಸಿಕೊಳ್ಳತೊಡಗಿದ. ಇಸ್ಲಾಮಿಕ್ ಪೂರ್ವ ಭಾರತದಲ್ಲಿ ಧಾರ್ಮಿಕ ವೃಂದಗಳು, ವಿಭಾಗಗಳು ತಮ್ಮನ್ನು ಎಂದೂ ಏಕೀಕೃತ ಧರ್ಮವಾಗಿ ಹಾಗೂ 'ಹಿಂದೂ'ಗಳಾಗಿ ಗುರುತಿಸಿಕೊಳ್ಳುತ್ತಲೇ ಇರಲಿಲ್ಲ ಎಂದು ಹೇಳಲು ಪುರಾತನ ಕಾಲಾವಧಿಯ ಆಕರಗಳಲ್ಲಿ ಬೇಕಾದಷ್ಟು ಸಾಕ್ಷ್ಯಗಳಿವೆ".[೨]

ಹಿಂದೂ ಎಂಬ ಒಂದು ಸೂತ್ರರೂಪೀ ಸಂಬಂಧದಿಂದ ಎಂದೂ ಅಭಿವ್ಯಕ್ತಿಗೊಂಡಿರದ ಭಾರತ ವಿವಿಧ ಜಾತಿಗಳಾಗಿ ಚದುರಿಕೊಂಡೇ ಸಾಗಿಬರುತ್ತಿದೆ. ಜಾತಿಗಳ ನಡುವೆಯೂ ಎಂಥ ಭೀಕರವಾದ ಬಿರುಕುಗಳಿವೆ ಎಂದರೆ, ಒಂದೇ ಜಾತಿಯೊಳಗಿನ ಉಪಜಾತೀಯರು

ಪರಸ್ಪರ ಕಚ್ಚಾಡುತ್ತಾರೆ. ಒಂದು ಜಾತಿ ಮತ್ತೊಂದು ಜಾತಿಯ ಎದುರು ತನ್ನ ಅಸ್ತಿತ್ವವನ್ನು ಸಾಬೀತು ಪಡಿಸಬೇಕಾದಾಗ ಈ ಉಪಜಾತಿಗಳು ಲಯವಾಗಿ ಏಕರೂಪೀ ಘನ ಜಾತಿಗಳು ಗೋಚರಿಸತೊಡಗುತ್ತವೆ. ಹೀಗೆಯೇ ಜಾತಿಗಳೂ ಲಯವಾಗಿ, ಜಾತಿಗಳ ನಡುವೆ ಸಂಪರ್ಕ ಬರುವುದು ಹಾಗೂ ಇಡೀ ಸಮುದಾಯವೇ ಒಂದು ಘನರೂಪಿ ಧರ್ಮದ ಚಹರೆ ಪಡೆದುಕೊಳ್ಳುವುದು, ಮತ್ತೊಂದು ಧರ್ಮ ಮುಖಾಮುಖಿಯಾದಾಗ. ಭಾರತ ಹಲವು ಜಾತಿಗಳ ಗುಂಪೇ ಹೊರತು ಏಕ ಧರ್ಮನಿಷ್ಠೆ ಇರುವ ಸಮುದಾಯ ಅಲ್ಲವೇ ಅಲ್ಲ. ಅಂಬೇಡ್ಕರರು 'ಈ ಹಿಂದೂಗಳನ್ನು ಜಾತಿಗಳ ಸಮೂಹವೆನ್ನುವುದಕ್ಕಿಂತ ತಮ್ಮ ಸ್ವಾರ್ಥಕ್ಕಾಗಿ ಕಾದಾಡುವ ಕದನಪ್ರೇಮಿ ಗುಂಪುಗಳೆಂದು ಕರೆಯುವುದೇ ಸರಿ' ಅನ್ನುತ್ತಾರೆ.[೪]

## ೧.೩ ಭರತ ಭೂಮಿಯಲ್ಲಿ ಮುಸಲ್ಮಾನರ ಮೊದಲ ಹೆಜ್ಜೆಗಳು

ಇಸ್ಲಾಮಿನ ಉಗಮಕ್ಕೆ ಮುಂಚೆನಿಂದಲೂ ಭಾರತ ಮತ್ತು ಅರೇಬಿಯಾಗಳು ವ್ಯಾಪಾರ ಹಾಗೂ ವಾಣಿಜ್ಯ ಸಂಪರ್ಕವನ್ನು ಹೊಂದಿದ್ದವು. ಇದರಿಂದಾಗಿ ಭಾರತದ ಪೂರ್ವ ಮತ್ತು ಪಶ್ಚಿಮ ಕರಾವಳಿಗಳಲ್ಲಿ ಅರಬ್ಬರ ವಸಾಹತುಗಳಿದ್ದವು. ಈ ಕುರಿತು ಕಾನ್‌ಪುರ ಗಲಭೆ ವಿಚಾರಣಾ ಸಮಿತಿಯ ವರದಿ ಹೀಗೆ ಹೇಳುತ್ತದೆ: ಕ್ರಿ.ಶ. ೬೩೦ ರ ಸುಮಾರಿಗೆ ಸಮಸ್ತ ಅರೇಬಿಯಾವು ಇಸ್ಲಾಂ ಧರ್ಮವನ್ನು ಅಂಗೀಕರಿಸಿತು. ಆಗ ಭಾರತದಲ್ಲಿದ್ದ ಅರಬ್ ವಸಾಹತುಗಳು ತಮ್ಮಷ್ಟಕ್ಕೆ ತಾವೇ ಮುಸ್ಲಿಂ ವಸಾಹತುಗಳಾದವು. ....... ಕ್ರಿ.ಶ. ೬೩೦ ರಿಂದ ಕ್ರಿ.ಶ. ೧೦೦೦ದ ವರೆಗೆ ಸಿಂಧ್ ಪ್ರದೇಶದ ಮೇಲಿನ ಅರಬರ ಒಂದು ದಾಳಿಯನ್ನು ಹೊರತುಪಡಿಸಿದರೆ, ಭಾರತದ ಮೇಲೆ ಮುಸ್ಲಿಮರ ದಾಳಿ ಇನ್ನೂ ಆರಂಭವಾಗಿಲ್ಲದ ಆ ಕಾಲದಲ್ಲಿ, ಭಾರತವು ಇಸ್ಲಾಂನೊಡನೆ ನಿಕಟ ಸಂಪರ್ಕವನ್ನು ಹೊಂದಿತ್ತು ಎಂದು ಹೇಳಬಹುದು. ................. ಅದರ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಉರುಬಿನ ಪ್ರಥಮ ಪ್ರವಾಹ ಬಹುತೇಕ ತೀರುವ ಹಂತಕ್ಕೆ ಬಂದಾಗ, ಅದರ ನಿಜವಾದ ರಾಜಕೀಯ ಸಂಪರ್ಕಗಳು ತಳ ಊರಲು ಪ್ರಾರಂಭಿಸಿದವು.[೫]

ಹೀಗೆ ವಿಸ್ತರಿಸಿಕೊಳ್ಳತೊಡಗಿದ ಅರಬ್ಬರಿಗೆ 'ಇಸ್ಲಾಂ ಧರ್ಮ' ಎಂಬ ಮತೀಯ ಆಲೋಚನೆಗಳು ಇರಲಿಲ್ಲ. ಅವರು ನಿರ್ದಿಷ್ಟವಾದ ಆಧ್ಯಾತ್ಮಿಕ ನಂಬಿಕೆ ಮತ್ತು ಲೌಕಿಕ ನಿಯಮಗಳಿಗೆ ಬದ್ಧರಾಗಿದ್ದ ಜನಸಮುದಾಯವಷ್ಟೇ ಆಗಿದ್ದರು. ತನ್ನೆದುರಿಗಿರುವ ಜನ ಒಂದು ಮತೀಯ ಸಮುದಾಯವಾಗಿ ಕಾಣಿಸುವವರೆಗೂ ಇಸ್ಲಾಂ ಒಂದು ಪ್ರತ್ಯೇಕತಾವಾದಿ ಚಿಂತನೆಯನ್ನು ಮಾಡಲೇ ಇಲ್ಲ. ಒಂದು ವೇಳೆ ಇಸ್ಲಾಂನ ಧರ್ಮನಿಷ್ಠೆ ಚುರುಕಾಗಿದ್ದರೆ ಹಿಂದೂವಾದಿ ಗುಂಪು ಆರಂಭದಲ್ಲೇ ಅವರನ್ನು ಹತ್ತಿಕ್ಕುವ ಪ್ರಯತ್ನವನ್ನು ಮಾಡುತ್ತಿತ್ತು. ಒಂದುವೇಳೆ ಹಿಂದೂ ಎಂಬ ಧರ್ಮ ಅಸ್ತಿತ್ವದಲ್ಲಿದ್ದು ಅದಕ್ಕೂ ಧರ್ಮವನ್ನು ವಿಸ್ತರಿಸುವ ಮತ್ತು ರಕ್ಷಿಸುವ ಹಿಂದೂ ಪ್ರತ್ಯೇಕತಾ ಹಾಗೂ ಶ್ರೇಷ್ಠತಾ ಪ್ರಜ್ಞೆ ಇದ್ದಿದ್ದರೆ ಮುಸಲ್ಮಾನರನ್ನು ನೆಲೆಗೊಳ್ಳಲು ಬಿಡುತ್ತಿರಲಿಲ್ಲ. ಈ ಸಂದರ್ಭದಲ್ಲಿ 'ಹಿಂದೂ' ಧರ್ಮಕ್ಕೆ ಇನ್ನು ಕೂಡ ಒಂದು ವೇದಿಕೆಯೇ ನಿರ್ಮಾಣವಾಗಿರಲಿಲ್ಲ. ಹಿಂದೂ ಎಂಬ ವಿಸ್ತಾರವಾದ ಭೌತಿಕ

ಸ್ವರೂಪವನ್ನು ಪಡೆಯದ ವೈದಿಕರು ಬೌದ್ಧ ಮತ್ತು ಜೈನರೊಡನೆ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಿದ್ದ ಕಾಲವದು.

ಇಸ್ಲಾಂ ಸಮುದಾಯಕ್ಕೆ ತಾನೊಂದು ಪ್ರತ್ಯೇಕ ಕೋಮು ಎಂಬ ಭಾವನೆ ಬೇರೂರಿ, ಕೋಮುವಾದಿ ಆಲೋಚನೆಗಳು ಹಾಗೂ ಆಕ್ರಮಣಗಳು ಬೆಳೆದದ್ದು ಹಿಂದುತ್ವದ ತೀವ್ರ ಪ್ರತಿಪಾದನೆಯ ನಂತರವೇ; ಅಥವಾ ಬ್ರಿಟಿಷರ ಒಡನಾಟದ ಜೊತೆ ಜೊತೆಗೆ. ಬಹು ಮುಖ್ಯವಾದ ಸಂಗತಿ ಎಂದರೆ ಕ್ರಿ.ಶ. ೧೩ನೇ ಶತಮಾನದ ವರೆಗೂ ನಾವು 'ಮುಸ್ಲಿಮರು' ಎಂಬ ಪದವನ್ನು ಸಮಾನ ಮತೀಯ ನಂಬಿಕೆಗಳಿಗೆ ಬದ್ಧವಾಗಿದ್ದ ಜನರನ್ನು ಗುರುತಿಸುವ ಪದವಾಗಿ ಬಳಸಲೇ ಇಲ್ಲ. ಈ ಕುರಿತು ರೋಮಿಲಾ ಥಾಪರ್ ಹೀಗೆ ಹೇಳುತ್ತಾರೆ:

> ಆದಿ ಕಾಲದಲ್ಲಿ ಅಂದರೆ ಕ್ರಿ.ಶ. ೭ ರಿಂದ ೧೩ನೇ ಶತಮಾನದವರೆಗೆ ಹಿಂದೂಗಳು ತಮ್ಮನ್ನು ಮುಸ್ಲಿಮರಿಂದ ಪ್ರತ್ಯೇಕಿಸಿಕೊಳ್ಳಲು ಬಳಸುತ್ತಿದ್ದ ಪದದ ಪ್ರಶ್ನೆಯೂ ಇಲ್ಲಿ ನಮ್ಮ ಚರ್ಚೆಗೆ ಅಷ್ಟೇ ಪ್ರಸ್ತುತ. ಇಂದು ನಾವು ಇತಿಹಾಸದ ಈ ಕಾಲಾವಧಿಯ ಬಗೆಗೆ ಬರೆಯುವಾಗ ಅರಬರು, ಟರ್ಕರು, ಪರ್ಷಿಯನ್ನರು ಎಲ್ಲರನ್ನೂ ಒಂದುಗೂಡಿಸಿ 'ಮುಸ್ಲಿಮರು' ಎಂಬ ಒಂದೇ ಪದದಿಂದ ವರ್ಣಿಸುತ್ತೇವೆ. ಆದರೆ ೧೩ನೆಯ ಶತಮಾನದವರೆಗೂ ಎಲ್ಲ ಆಕರಗಳಲ್ಲೂ ಮುಸ್ಲಿಮ್ ಎಂಬ ಪದವನ್ನು ಈ ನಾನಾ ಜನತೆಗಳನ್ನು ವರ್ಣಿಸಲು ಬಳಸಿದುದು ಅಪರೂಪ. ಆ ಕಾಲಾವಧಿಯ ಆಕರಗಳು ಧಾರ್ಮಿಕ ಪದವನ್ನು ಬಳಸುವುದೇ ಇಲ್ಲ. ಅವು ಆ ಜನರನ್ನು ಶುದ್ಧ ರಾಜಕೀಯ ರೀತಿಯಲ್ಲಿ ಉಲ್ಲೇಖಿಸುತ್ತವೆ. ಟರ್ಕರನ್ನು ತುರುಷ್ಕರೆಂದು, ಅರಬರನ್ನು ಯವನರೆಂದು ವರ್ಣಿಸುತ್ತವೆ.[೬]

ಹೀಗಾಗಿ ಇಸ್ಲಾಂ ಆರಂಭದಿಂದಲೂ ಒಂದು ಸಂಘಟಿತ ಧರ್ಮವಾಗಿರಲಿಲ್ಲ. ಈಗ ನಾವು ಇಸ್ಲಾಂ ಎಂದು ಕರೆಯುವ ನಂಬಿಕೆ ಮತ್ತು ಆಚರಣೆಗಳಿಗೆ ನಿಷ್ಠವಾದ ಜನಸಮುದಾಯವೊಂದು ಅಮತೀಯವಾಗಿ ಅರಬರು, ಟರ್ಕರು ಹಾಗೂ ಪರ್ಷಿಯನ್ನರೆಂಬ ಭಿನ್ನ ಧಾರೆಗಳಲ್ಲಿ ಸಾಗಿಬರುತ್ತಿತ್ತು.

### ೧.೪ ವಸಾಹುತುಶಾಹಿಯ ದಾಹ : ಮತೀಯವಾದದ ಭ್ರೂಣ

ಈಗ ನಾವು 'ಮುಸಲ್ಮಾನರು' ಎಂದು ಕರೆಯುವ ಅರಬ್ಬರು, ಟರ್ಕರು, ಪರ್ಶಿಯನ್ನರು ಭಾರತಕ್ಕೆ ಬಂದಾಗ ಇಲ್ಲಿ ಅವರನ್ನು ನಿರಾಕರಿಸುವ, ಎದುರಿಸುವ ಯಾವುದೇ ಬಗೆಯ ಸಂಘರ್ಷಗಳಾಗಲಿಲ್ಲ ಎಂಬುದನ್ನು ಈ ಹಿಂದೆ ನೋಡಿದ್ದೇವೆ. ಒಂದು ಕೇಂದ್ರೀಕೃತ

ಧರ್ಮದ ಪ್ರಜ್ಞೆ ಹಾಗೂ ಮತೀಯ ಆಲೋಚನೆಗಳಿಲ್ಲದ ಮುಸ್ಲಿಮರನ್ನು ಭಾರತೀಯರು ತಮ್ಮೊಳಗಿನ ಹಲವು ಜಾತಿಗಳಲ್ಲಿ ಇವರನ್ನೂ ಒಂದು ಗುಂಪೆಂದು ಪರಿಗಣಿಸಿದ್ದರು ಎಂಬುದನ್ನು ಈಗಾಗಲೇ ಕಂಡುಕೊಂಡಿದ್ದೇವೆ. ಭಾರತದಲ್ಲಿ ಸಂಘರ್ಷ ಮತ್ತು ಆಕ್ರಮಣಗಳ ಸಂದರ್ಭದಲ್ಲಿ ಧರ್ಮ ಮತ್ತು ಜಾತಿ ಇವೆರಡಕ್ಕೂ ಅಂತಹ ವ್ಯತ್ಯಾಸಗಳಿಲ್ಲ. ಅಂದರೆ ಮೂಲಭೂತವಾದಿ ಮನೋಭಾವನೆಯಿಂದೆದ್ದ ಪ್ರತ್ಯೇಕತಾ ಪ್ರಜ್ಞೆಯ ಜಾಗೃತಿಗೆ ಧರ್ಮವೇ ಮುಖಾಮುಖಿಯಾಗಬೇಕಿಲ್ಲ; ಜಾತಿಯೂ ಈ ಕೆಲಸವನ್ನು ನಿರ್ವಹಿಸುತ್ತದೆ. ನನ್ನ ಪ್ರಶ್ನೆ ಮತ್ತು ಕುತೂಹಲ ಏನೆಂದರೆ, ಶ್ರೇಣೀಕೃತ ಜಾತೀಯ ರಚನೆಯನ್ನು ಹೊಂದಿದ್ದ ಭಾರತ ಈ ಮುಸಲ್ಮಾನರನ್ನು ಒಂದು ಜಾತಿಯನ್ನಾಗಿಯಾದರೂ ಹೇಗೆ ಸ್ವೀಕರಿಸಿತ್ತು ಎಂಬುದು. ಆ ವೇಳೆಗಾಗಲೇ ಹಿಂದೂಗಳಿಗೆ ಧರ್ಮ ಪ್ರಜ್ಞೆ ಇಲ್ಲದಿದ್ದರೂ ವೈದಿಕರು ಶ್ರೇಷ್ಠ ಕುಲದ ರೋಗ ಹತ್ತಿಸಿಕೊಂಡು, ಜೈನರು ಮತ್ತು ಬೌದ್ಧರ ನಡುವೆ ಜಟಾಪಟಿಯಲ್ಲಿ ತೊಡಗಿದ್ದರು. ಶೈವ, ವೈಷ್ಣವರ ನಡುವೆಯೂ ತೇಲಾಟ ಮೇಲಾಟಗಳು ನಡೆಯುತ್ತಿದ್ದವು. ಜಾತಿ ವ್ಯವಸ್ಥೆ ಇಂದಿಗಿಂತಲೂ ಹೆಚ್ಚು ಬಿಗಿಯಾಗಿತ್ತು. ಈ ಸಂದರ್ಭದಲ್ಲಿ ವೈದಿಕ ವರ್ಗ ಮುಸಲ್ಮಾನರನ್ನು ತಮಗೆ ಸಮನಾದ 'ಜಾತಿ' ಎಂದು ಪರಿಗಣಿಸದೆ ಇನ್ನುಳಿದ ಶೂದ್ರರಲ್ಲೊಂದಾಗಿ ಕಾಣುತ್ತಲಿತ್ತು. ಈ ಬಗೆಗೆ ರೋಮಿಲಾ ಥಾಪರ್ ಒಂದು ಮಹತ್ವದ ವಿಚಾರವನ್ನು ಮಂಡಿಸುತ್ತಾರೆ. "ಟರ್ಕರು, ಪರ್ಶಿಯನ್ನರು ಹಾಗೂ ಅರಬರನ್ನು ಸೂಚಿಸಲು ಬಳಸುತ್ತಿದ್ದ ಮತ್ತೊಂದು ಪದವೆಂದರೆ 'ಮ್ಲೇಚ್ಛರು' ಎಂಬುದು. ಈ ಪದಕ್ಕೂ ಒಂದು ಪುರಾತನ ಇತಿಹಾಸವಿದೆ. ಇದು ಮೊದಲು ಋಗ್ವೇದದಲ್ಲಿ ಕಂಡುಬರುತ್ತದೆ. ಈ ಪದವನ್ನು ಪ್ರಧಾನವಾಗಿ ಆರ್ಯರಲ್ಲದ ಭಾಷೆ ಆಡುತ್ತಿದ್ದ, ಹಾಗಾಗಿ ಆರ್ಯರ ಸಂಸ್ಕೃತಿಯ ಪರಿಚಯ ಹೊಂದಿರದಿದ್ದ ಜನರನ್ನು ಸೂಚಿಸಲು ಬಳಸಲಾಗುತ್ತಿತ್ತು. ಇದರಿಂದಾಗಿ, ಅತ್ಯಂತ ಆದಿಕಾಲದ ಮ್ಲೇಚ್ಛರೆಂದರೆ ಆರ್ಯರದಲ್ಲದ ಭಾಷೆಯನ್ನು ಮಾತನಾಡುತ್ತಿದ್ದ, ಪ್ರಧಾನವಾಗಿ ಉತ್ತರ ಹಾಗೂ ಮಧ್ಯಭಾರತದ ಕೆಲವು ಭಾಗಗಳಲ್ಲಿ ವಾಸಿಸುತ್ತಿದ್ದ ವಿವಿಧ ಬುಡಕಟ್ಟುಗಳ ಜನರಾಗಿದ್ದರು. ಅನಂತರ ಅರ್ಥ ವಿಸ್ತರಣೆಯಾಗಿ ಈ ಪದವನ್ನು ವಿದೇಶೀಯರನ್ನು ಸೂಚಿಸಲು ಬಳಸಲಾಯಿತು. ಈ ಪ್ರಸಂಗದಲ್ಲೂ 'ಮ್ಲೇಚ್ಛ' ಎಂಬ ಪದವು ಧಾರ್ಮಿಕ ಪದವಲ್ಲ. ಆದರೆ ಸಾಂಸ್ಕೃತಿಕ ಅರ್ಥವುಳ್ಳದ್ದಾಗಿದೆ. ಆದ್ದರಿಂದ ಅರಬರನ್ನೂ ಟರ್ಕರನ್ನೂ ಮ್ಲೇಚ್ಛರೆಂದು ಕರೆದಾಗ ಪರಕೀಯ ಸಂಸ್ಕೃತಿಯ ವಿದೇಶಿಯರು ಎಂದೇ ಕಾಣಲಾಗುತ್ತಿತ್ತು".[೭]

ವ್ಯಾಪಾರದಲ್ಲಿ ತೊಡಗಿದ್ದು ಮ್ಲೇಚ್ಛರೆನಿಸಿಕೊಳ್ಳುತ್ತಿದ್ದ ಈ ಅರಬರು, ಪರ್ಷಿಯನ್ನರು, ಮತ್ತು ಟರ್ಕರು ಭಾರತದ ಮೇಲ್ಜಾತಿಗೆ, ತನ್ನ ವರ್ಗ ವ್ಯವಸ್ಥೆಯಲ್ಲಿರುವ ವೈಶ್ಯರಿಗೆ ಹತ್ತಿರದವರಾಗಿ ಕಂಡರೆ, ವೈಶ್ಯ ಮತ್ತು ಶೂದ್ರರು ಅವರನ್ನು ಸಾಮಾಜಿಕ ಸ್ತರದಲ್ಲಿ ತಮಗಿಂತಲೂ ಕೆಳಗಿನವರನ್ನಾಗಿ ಕಂಡಿದ್ದಾರೆ. ಇದು ರಾಜಕೀಯ ಹಾಗೂ ಸಾಂಸ್ಕೃತಿಕ ನಿಯಂತ್ರಣದ ಹಂಬಲದಿಂದ ಭಾರತದಲ್ಲಿ ತನ್ನ ವಸಾಹತುಗಳನ್ನು ಸ್ಥಾಪಿಸಿಕೊಂಡಿರದಿದ್ದ ಅರಬರು, ಪರ್ಷಿಯನ್ನರು ಹಾಗೂ ಟರ್ಕರಿಗೆ ಆತಂಕದ ಸಂಗತಿಯಾಗಿರಲಿಲ್ಲ.

ಆದರೆ ಬ್ರಿಟಿಷರಿಗೆ ವ್ಯಾಪಾರವೆಂಬುದು ತೋರಿಕೆಯ ಕಾರಣವಾದರೂ ರಾಜಕೀಯ ಹಿಡಿತ ಬ್ರಿಟಿಷ್ ವಸಾಹತುಗಳ ಆಳದ ಉದ್ದೇಶವಾಗಿದ್ದಂತೂ ಸ್ಪಷ್ಟ. ಹೀಗೆ ಬ್ರಿಟನ್ ವಸಾಹತುಗಳು ಭಾರತದಲ್ಲಿ ನೆಲೆಸಲಾರಂಭಿಸಿದಾಗ ಆ ವೇಳೆಗಾಗಲೇ ಮುಸಲ್ಮಾನರು ರಾಜಕೀಯವಾಗಿಯೂ ಬೇರೂರಿದ್ದರು. ಆಗಲೂ ಒಂದು ಸಂಘಟಿತ ಧರ್ಮವಾಗಿರದಿದ್ದ ಹಿಂದೂ ಜಾತೀಯ ಸಂರಚನೆ, ತಾನು ಹಿಂದೆ ಮುಸಲ್ಮಾನರನ್ನು ಕಂಡಂತೆ ಬ್ರಿಟಿಷರನ್ನು ಮ್ಲೇಚ್ಛರೆಂದೇ ಪರಿಗಣಿಸಲಾರಂಭಿಸಿತ್ತು. ಮುಸಲ್ಮಾನರನ್ನು ಭಾರತದ ಮೇಲ್ಜಾತಿ ಮ್ಲೇಚ್ಛರು ಎಂದು ಗುರುತಿಸಿ ಸ್ವೀಕರಿಸಿತ್ತು. ನಿಯಮಗಳ ರೂಪೀಕರಣ ಮತ್ತು ಪ್ರಯೋಗ ಎರಡೂ ಮೇಲ್ಜಾತಿಯ ಕೈಯಲ್ಲಿದ್ದುದರಿಂದ ಇದನ್ನು ಇನ್ನುಳಿದ ಯಾವ ಜಾತಿಗಳೂ ಪ್ರಶ್ನಿಸಿರಲಿಲ್ಲ. ಬಹುಶಃ ಶೂದ್ರರಿಗಿಂತಲೂ ಕೊನೆಯ ನಿಕೃಷ್ಟ ಜಾತಿಯೊಂದು ನಿರ್ಮಾಣವಾದಾಗ ಶೂದ್ರರು ತಮಗೂ ಒಬ್ಬ ಅಸ್ಪೃಶ್ಯನಿದ್ದಾನೆಂದು ಸಮಾಧಾನಪಟ್ಟುಕೊಂಡಿರಬಹುದು. ಭಾರತದ ಮೇಲ್ಜಾತಿ ಅಥವಾ ಪುರೋಹಿತಶಾಹಿ ಕ್ರಿಶ್ಚಿಯನ್ನರನ್ನೂ ಮ್ಲೇಚ್ಛ ಎಂದು ಪರಿಗಣಿಸಲಾರಂಭಿಸಿದ್ದಾಗ, ಇನ್ನುಳಿದ ಜಾತಿಗಳು ಈ ನವ ಮ್ಲೇಚ್ಛರನ್ನು ತಮ್ಮ ಅಸ್ಪೃಶ್ಯರನ್ನಾಗಿ ಸ್ವೀಕರಿಸಲಾರಂಭಿಸಿದ್ದವು. ವಸಾಹತುಶಾಹಿಯು ಭಾರತದ ಸಾಮಾಜಿಕ ರಚನೆಯಲ್ಲುಂಟು ಮಾಡಿದ ಈ ಬಗೆಯ ಆರಂಭದ ಪಲ್ಲಟಗಳನ್ನು ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಹಾಗೂ ಕಾರಂತರ 'ಚೋಮನ ದುಡಿ' ಕಾದಂಬರಿಗಳು ಸ್ಪಷ್ಟವಾಗಿ ತೋರಿಸುತ್ತವೆ.

'ಮಲೆಗಳಲ್ಲಿ ಮದುಮಗಳ'ಲ್ಲಿ ಕ್ರೈಸ್ತ ಪಾದ್ರಿ ಜೀವರತ್ನಯ್ಯನನ್ನು ಹೀಗೆ ಉಪಚರಿಸಲಾಗಿದೆ:

> ಅಷ್ಟರಲ್ಲಿ ಅಂತಕ್ಕ ದೇವಯ್ಯನನ್ನು ಒಳಗೆ ಕರೆದಳು, ಸುಬ್ಬಣ್ಣ ಹೆಗ್ಗಡೆಯವರು ಊಟಕ್ಕೆ ಏರ್ಪಾಡಾಗುತ್ತಿದೆ ಎಂಬುದನ್ನು ಅರಿತು 'ಪಾದ್ರಿಗಳೆ, ಪಾಪ, ನಿಮಗೆ ಊಟಕ್ಕೆ ಬಾಳ ಹೊತ್ತಾಯ್ತು, ಮೊದಲು ಊಟ ಮುಗಿಸಿ' ಎಂದರು.
>
> ಇತ್ತೀಚೆಗೆ ಸಾಮಾನ್ಯವಾಗಿ, ಪಾದ್ರಿಯೊಡನೆಯೇ ಹೊರಗಡೆ ಜಗಲಿಯಲ್ಲಿ ಊಟಕ್ಕೆ ಕುಳಿತುಕೊಳ್ಳುತ್ತಿದ್ದ ದೇವಯ್ಯ ಇವತ್ತು ಹಾಗೆ ಮಾಡಲು ಅಂಜಿ, ಜೀವರತ್ನಯ್ಯ ಒಬ್ಬರಿಗೇ ಜಗಲಿಯಲ್ಲಿ ಬಳ್ಳೆ ಹಾಕಲು ಹೇಳಿ, ತಾನೂ ಐಗಳು ಒಳಗೆ ಜಾತಿಯವರು ಕೂರುವಲ್ಲಿ ಊಟಕ್ಕೆ ಕುಳಿತರು. ಬೆಟ್ಟಳ್ಳಿ ದೇವಯ್ಯಗೌಡರ ಆ ಬದಲಾಯಿಸಿದ ವರ್ತನೆಯನ್ನು ಗಮನಿಸಿ ಜೀವರತ್ನಯ್ಯ ಒಳಗೊಳಗೆ ತುಸು ಅಸಮಾಧಾನ ಪಟ್ಟುಕೊಂಡರು.[೮]
>
> ಇನ್ನೂ ಏನೇನು ಹೇಳುತ್ತಿದ್ದನೊ ಕಾಡು? ಅಷ್ಟರಲ್ಲಿ ಅವನ ಅವ್ವ ದೊಡ್ಡಮ್ಮ ಹೆಗ್ಗಡಿತಿಯವರು 'ಸಾಕು ಬಿಡೋ, ಮತ್ತೇನು ಬಿರಾಂಬ್ರ ಮನೇಲಿ ಗೌಡರ್ನ ಒಳಗೆ ಕೂರ್ಸಿ ಇಕ್ತಾರೆ ಅಂತಾ

ಮಾಡಿಯೇನು? ನಮ್ಮನೇಲಿ, ಆ ಕಿಲಸ್ತರ ಉಪದೇಶಿ ಬರ್‍ತಾನಲ್ಲ, ಅವನ್ನ ಒಳಗೆ ಕೂರ್‍ಸಿ ಊಟ ಹಾಕ್ತೀಯೇನು? ಹಂಗೇನೆ. ಬಿರಾಂಬರ ಮನೇಲಿ ನಮ್ಮನ್ನೆಲ್ಲ ಹೊರಗೆ ಕೂರಿಸಿ ಇಕ್ತಾರೆ' ಎಂದು ಬ್ರಾಹ್ಮಣ ಸಮರ್ಥನೆ ಮಾಡಿದರು.[೯]

'ಮಲೆಗಳಲ್ಲಿ ಮದುಮಗಳಲ್ಲಿ' ಕ್ರೈಸ್ತರು ಮತ್ತು ಮುಸ್ಲಿಮರ ಸ್ಥಾನ ಹೀಗಿದೆ:

ಯಾರಿಗೇನು ಗೊತ್ತಿಲ್ಲೇನು ಇವರ ಹಣೇಬರಾ? ಇವರ ಕುಲಗೆಟ್ಟ ಅನಾಚಾರನ ಯಾರ ಹತ್ರ ಮುಚ್ಚಿಡ್ತಾರಂತೆ? ಅವರು ಈಗಂತೂ ಸಣುಬಿನ ನಾಯಿ, ಹಲುಬಿನ ಎತ್ತಿಗಿಂತ ಅತ್ತತ್ತ ಆಗಿಬಿಟ್ಟಾರೆ! ಹಳೆಪೈಕದೋರೋ? ಹೊಲೇರೋ? ಸೆಟ್ರೋ? ಹಸಲೋರೋ? ಬಿಲ್ಲೋರೋ? ಕಡೀಗೆ ಕಿಲಸ್ತರು ಸಾಬರೋ? ಯಾರಾದರೂ ಸೈ ಹೆಣ್ ಜಾತಿ ಆಗಿಬಿಟ್ರೆ ಆತು......[೧೦]

ತಿಮ್ಮಪ್ಪ ಹೆಗ್ಗಡೆಯು ನೀಚತನವನ್ನು ಹೇಳುವ, ಆಳು ಮಂಜನ ಈ ಮಾತಿನಲ್ಲಿ ಇರುವ ಜಾತಿ ಪಟ್ಟಿಯಲ್ಲಿ ಕಿಲಸ್ತರು ಮತ್ತು ಸಾಬರರ ಬಗೆಗಿರುವ 'ಕಡೀಗೆ' ಪದದ ತಿರಸ್ಕಾರವನ್ನು ಗಮನಿಸಿ.

ಇದೇ ವಸಾಹತುಶಾಹಿ ಕಾಲಘಟ್ಟದಲ್ಲಿ ನಿರ್ಮಾಣವಾದ ಚರಿತ್ರೆಯ ಸಂಕಥನವನ್ನು ಗಮನಿಸಬೇಕು. ಪೂರ್ವದ ಬಗೆಗೆ ಬರೆಯಲಾರಂಭಿಸಿದ್ದ ಓರಿಯಂಟಲಿಸ್ಟರು ತಮ್ಮದೇ ನೆಲದ ಕಲ್ಪನೆಯಲ್ಲಿ ಭಾರತದ ಚರಿತ್ರೆಯನ್ನು ಬರೆಯತೊಡಗಿದ್ದರು. ಆರಂಭದಲ್ಲೇ ಭಾರತದ ಚರಿತ್ರೆಯ ಬಗೆಗೆ ವಸಾಹತು ಚರಿತ್ರಕಾರ ಜೇಮ್ಸ್ ಮಿಲ್ ಬರೆದ 'ಬ್ರಿಟಿಷ್ ಭಾರತದ ಇತಿಹಾಸ' ಭಾರತದ ಚರಿತ್ರೆಯನ್ನು ಹಿಂದೂ ನಾಗರಿಕತೆ, ಮುಸ್ಲಿಂ ನಾಗರಿಕತೆ ಹಾಗೂ ಬ್ರಿಟಿಷ್ ನಾಗರಿಕತೆ ಎಂಬ ಮೂರು ಕಾಲಗಳನ್ನಾಗಿ ವಿಭಾಗಿಸಿಕೊಂಡಿರುವ ಕ್ರಮವನ್ನು ನಮ್ಮ ಚರಿತ್ರಕಾರರು ಗುರುತಿಸಿದ್ದಾರೆ. ಇದು ಭಾರತದಲ್ಲಿ ಇತಿಹಾಸವನ್ನು ಕೋಮುವಾರು ನೆಲೆಯಲ್ಲಿ ವಿಭಾಗಿಸುವ ಮತ್ತು ವ್ಯಾಖ್ಯಾನಿಸುವ ಕ್ರಮಕ್ಕೆ ಮೂಲ ಮಾದರಿಯಾಯಿತು. ಈ ಮಾದರಿ ನಮ್ಮಲ್ಲಿ ಎಷ್ಟು ಆಳವಾದ ಮತೀಯ ನೋಟಕ್ರಮವನ್ನು ಉಕ್ಕಿಸಿತೆಂದರೆ ಸಾಹಿತ್ಯ ಚರಿತ್ರೆಯನ್ನು ಬರೆಯುವಾಗಲೂ ಮತಕೇಂದ್ರಿತ ವಿಭಾಗಕ್ರಮಗಳು ರೂಪುಗೊಳ್ಳುವಂತಾಯಿತು.

ಈ ಹಿಂದೆ ಕಂಡುಕೊಂಡಂತೆ 'ಹಿಂದೂ' ಎಂಬುದು ಅರಬರು ರೂಪಿಸಿದ ಪದ ಹಾಗೂ 'ಮುಸ್ಲಿಂ' ಎಂಬುದು ೧೩ನೇ ಶತಮಾನದವರೆಗೂ ಅರಬರು, ಟರ್ಕರು

ಮತ್ತು ಪರ್ಷಿಯನ್ನರನ್ನು ಹೆಸರಿಸುವ ಪದವಾಗಿರಲೇ ಇಲ್ಲ ಎಂಬುದನ್ನು ಗಮನಿಸಿದರೆ ಜೇಮ್ಸ್ ಮಿಲ್ಲನ ಈ ಚರಿತ್ರೆಯ ಮತಕೇಂದ್ರಿತ ವಿಭಾಗ ಎಷ್ಟು ಅಸಮಂಜವಾದುದೆಂಬುದು ಅರ್ಥವಾಗದೆ ಇರದು. ಮಿಲ್ಲನ ಈ ಮಾದರಿಯನ್ನು ಇತರೆ ಯಾವ ಓರಿಯಂಟಲ್ ಚರಿತ್ರಕಾರರು ಹಾಗೂ ಭಾರತದ ಆ ನಂತರದ ಚರಿತ್ರಕಾರರ್ಯಾರೂ ಮುರಿದು ಕಟ್ಟದಿದ್ದದ್ದು ವಿಪರ್ಯಾಸ. ಅಲ್ಲದೆ ಬಹು ಮುಖ್ಯವಾಗಿ ವಸಾಹತುಕಾರನ ನೋಟಕ್ರಮ ಮತ್ತು ಮೌಲ್ಯಗಳು ವಸಾಹತು ಜನರಲ್ಲಿ ಹೇಗೆ ಆಳವಾಗಿ ಬೇರೂರುತ್ತವೆ ಮತ್ತು ವಸಾಹತುಕಾರನನ್ನೇ ಅನುಕರಿಸುತ್ತವೆ ಎಂಬುದರ ಎಚ್ಚರ ಕೂಡ. ವಸಾಹತು ಘಟ್ಟದಲ್ಲಿ ವಸಾಹತುಕಾರ ಸಮಾಜ, ಸಾಹಿತ್ಯ, ಸಂಸ್ಕೃತಿ, ಜೀವನ ಕ್ರಮಗಳ ಬಗೆಗೆ ತನ್ನ ಗ್ರಹಿಕೆಗಳನ್ನು ಶ್ರೇಷ್ಠ ಅಂದುಕೊಳ್ಳುತ್ತಾ, ತಾನು ಕನಿಷ್ಠವೆಂದುಕೊಂಡ ದೇಸಿ ಬದುಕಿನಲ್ಲಿ ಒಂದು ಬಗೆಯ ಒತ್ತಡಗಳನ್ನು ನಿರ್ಮಾಣ ಮಾಡುತ್ತಿರುತ್ತಾನೆ. ಇಂಥ ಸನ್ನಿವೇಶದಲ್ಲಿ ವಸಾಹತುಕಾರನನ್ನು ಒಪ್ಪಿಕೊಳ್ಳುವ ಹಾಗೂ ಮುಖಾಮುಖಿ ಮಾಡುವ-ಎರಡೂ ರೀತಿಯ ಮಾದರಿಗಳು ಸ್ಥಳೀಯವಾಗಿ ನಿರ್ಮಾಣವಾಗುತ್ತವೆ. 'ವಸಾಹತು ಸನ್ನಿವೇಶ ವಸಾಹತುವಾದೀ ಮೌಲ್ಯಗಳ ಶ್ರೇಷ್ಠತೆಯನ್ನು ಪ್ರತಿಪಾದಿಸಲು ಹಾಗೂ ಹೇರಲು ನಿರಂತರವಾಗಿ ಪ್ರಯತ್ನಿಸುವುದರಿಂದ ಎರಡು ಬಗೆಯ ಪ್ರತಿಕ್ರಿಯೆಗಳು ಹುಟ್ಟಿಕೊಳ್ಳುತ್ತವೆ : ಒಂದು, ವಸಾಹತೀಕರಣಗೊಂಡವನೂ ವಸಾಹತುಕಾರನ ಮೌಲ್ಯಗಳಿಗೆ ಹತ್ತಿರವಾಗಲು ಪ್ರಯತ್ನಿಸುತ್ತಾನೆ. ಎರಡು, ವಸಾಹತುಕಾರನ ಮೌಲ್ಯಗಳನ್ನು ವಿರೋಧಿಸುತ್ತಾ, ತನ್ನ ಮೌಲ್ಯಗಳಿಗೆ ತೀವ್ರವಾಗಿ ಆತುಕೊಳ್ಳುತ್ತಾ ಉಗ್ರ ಸ್ವ-ಸಮರ್ಥನೆಯನ್ನಾರಂಭಿಸುತ್ತಾನೆ. ಮತೀಯವಾದೀ ಮೂಲಭೂತವಾದ ಹುಟ್ಟುವುದು ಈ ಘಟ್ಟದಲ್ಲಿ'.[೧೧]

**ಕೊನೆ ಟಿಪ್ಪಣಿಗಳು**

೧. ಯು.ಆರ್. ಅನಂತಮೂರ್ತಿ, 'ಕಾಲ ದೇಶ ಮೀರಿದ ಒಂದು ಅಪೂರ್ವ ಘಟನೆ', ಋಜುವಾತು, ೨೦೦೭, ಬೆಂಗಳೂರು: ಅಂಕಿತ ಪ್ರಕಾಶನ, ಪುಟ: ೧೪೦
೨. ಬಾಬಾ ಸಾಹೇಬ್ ಅಂಬೇಡ್ಕರ್, ಅಸ್ಪೃಶ್ಯರ ವಿಮೋಚನೆ, ಅಂಬೇಡ್ಕರ್ ವಿಚಾರ ಸಂಗ್ರಹ ಮಾಲೆ-೪, ಕನ್ನಡ ಸಂಗ್ರಹಾನುವಾದ: ನಟರಾಜ್ ಹುಳಿಯಾರ್, ೧೯೯೦, ಅಂಬೇಡ್ಕರ್ ಶತಮಾನೋತ್ಸವ ಸಮಿತಿ ಪ್ರಕಾಶನ, ಪುಟ: ೨೩-೨೪.
೩. ರೋಮಿಲಾ ಥಾಪರ್, 'ಕೋಮುವಾದ ಹಾಗೂ ಪುರಾತನ ಭಾರತೀಯ ಇತಿಹಾಸ ಲೇಖನ'. ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ, ಕನ್ನಡಕ್ಕೆ: ಕೆ.ಎಲ್. ಗೋಪಾಲಕೃಷ್ಣ ರಾವ್, ೧೯೯೮, ಬೆಂಗಳೂರು, ನವಕರ್ನಾಟಕ ಪ್ರಕಾಶನ, ಪುಟ: ೧೪-೧೫.
೪. ಬಾಬಾ ಸಾಹೇಬ್ ಅಂಬೇಡ್ಕರ್, ಅಸ್ಪೃಶ್ಯರ ವಿಮೋಚನೆ, ಅಂಬೇಡ್ಕರ್ ವಿಚಾರ ಸಂಗ್ರಹ ಮಾಲೆ-೪, ಕನ್ನಡ ಸಂಗ್ರಹಾನುವಾದ: ನಟರಾಜ್ ಹುಳಿಯಾರ್, ೧೯೯೦, ಅಂಬೇಡ್ಕರ್ ಶತಮಾನೋತ್ಸವ ಸಮಿತಿ ಪ್ರಕಾಶನ,
೫. ಈಶ್ವರ ಚಂದ್ರ,(ಕನ್ನಡಕ್ಕೆ), ಕೋಮುವಾರು ಸಮಸ್ಯೆ, (ಕಾನ್‌ಪುರ ಗಲಭೆ ವಿಚಾರಣಾ ಸಮಿತಿಯ ವರದಿ), ೨೦೦೬, ನವದೆಹಲಿ: ನ್ಯಾಷನಲ್ ಬುಕ್ ಟ್ರಸ್ಟ್, ಪುಟ: ೨
೬. ರೋಮಿಲಾ ಥಾಪರ್, 'ಕೋಮುವಾದ ಹಾಗೂ ಪುರಾತನ ಭಾರತೀಯ ಇತಿಹಾಸ ಲೇಖನ' ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ, ಕನ್ನಡಕ್ಕೆ: ಕೆ.ಎಲ್. ಗೋಪಾಲಕೃಷ್ಣ ರಾವ್, ೧೯೯೮, ಬೆಂಗಳೂರು: ನವಕರ್ನಾಟಕ ಪ್ರಕಾಶನ, ಪುಟ: ೧೫

೭ ಅದೇ, ಪುಟ: ೧೬

೮. ಕುವೆಂಪು, 'ಮಲೆಗಳಲ್ಲಿ ಮದುಮಗಳು'. ೨೦೦೧. ಮೈಸೂರು: ಉದಯರವಿ ಪ್ರಕಾಶನ. ಪುಟ: ೩೦೯.

೯. ಅದೇ, ಪುಟ: ೪೨೪.

೧೦. ಅದೇ, ಪುಟ: ೪೬೪.

೧೧. ನಟರಾಜ್ ಹುಳಿಯಾರ್, ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ. ೨೦೦೪. ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

## ಅಧ್ಯಾಯ ೨

# ಕೋಮುವಾದ : ಒಂದು ಫ್ಯಾಸಿಸ್ಟ್ ಐಡಿಯಾಲಜಿ

ಕೋಮುವಾದವು ಒಂದು ರಾಜಕೀಯ ತಂತ್ರಗಾರಿಕೆ ಮಾತ್ರವಲ್ಲ; ಅದೊಂದು ವಿಕಾರಗೊಂಡ ಮನಸ್ಸಿನಿಂದ ಹೊಮ್ಮುವ ತಾತ್ವಿಕತೆ. ಎಲ್ಲ ಕೋಮುವಾದಿ ಗುಂಪುಗಳು ಮೂಲಭೂತವಾದಿ ಚಿಂತನೆಗಳಿಂದ ಕೂಡಿದ ತಾತ್ವಿಕ ತಳಹದಿಯನ್ನು ಹೊಂದಿವೆ. ಈ ತಾತ್ವಿಕತೆಯು ಕಾಲಕಾಲಕ್ಕೆ ಕೋಮುವಾದದ ಆಕ್ರಮಣಗಳು, ಹೋರಾಟಗಳು, ಆಚರಣೆಗಳು ಹಾಗೂ ಅವುಗಳ ಸ್ವರೂಪಗಳನ್ನು ಹೊಸ ಹೊಸ ಆವೃತ್ತಿಗಳಲ್ಲಿ ರೂಪಿಸಿಕೊಳ್ಳುತ್ತಲೇ ಸಾಗುತ್ತದೆ. ತನ್ನ ಎದುರಿನ ಕೋಮಿನವರನ್ನು ಮಟ್ಟ ಹಾಕಬೇಕು, ನಿಯಂತ್ರಿಸಬೇಕು ಅಂದುಕೊಳ್ಳುವ ಪ್ರತಿ ಕೋಮು ಕೂಡ ತನಗೊಂದು ವಿರೋಧಿಯನ್ನು ನಿರ್ಮಿಸಿಕೊಂಡಿದೆ. ಹೀಗೆ ಅನ್ಯಕೋಮಿನ ಬಗೆಗೆ ಯಾವಾಗಲೂ ಗುಪ್ತ ಕಾರ್ಯಾಚರಣೆಯನ್ನು ರೂಪಿಸಿಕೊಳ್ಳುವ ಈ ಐಡಿಯಾಲಜಿ ಬಹುದೊಡ್ಡ ಪಡೆಯೊಂದನ್ನು ಕಟ್ಟುತ್ತದೆ. ಧರ್ಮವನ್ನು ಹೀಗೆ ಐಡಿಯಾಲಜಿಯನ್ನಾಗಿ ರೂಪಿಸಿಕೊಳ್ಳುವ ಪ್ರಕ್ರಿಯೆಯ ಬಗೆಗೆ ಅಶೀಶ್ ನಂದಿಯವರ ಗ್ರಹಿಕೆಯ ಮೂಲಕ ನಟರಾಜ್ ಹುಳಿಯಾರ್ ಹೀಗೆ ಹೇಳುತ್ತಾರೆ: "ಅಶಿಶ್ ನಂದಿ ತನ್ನ 'ಪಾಲಿಟಿಕ್ಸ್ ಆಫ್ ಸೆಕ್ಯುಲರಿಸಂ' ಲೇಖನದಲ್ಲಿ ಪಶ್ಚಿಮ ಏಷಿಯಾದಲ್ಲಿ ಧರ್ಮವು 'ನಂಬಿಕೆ' ಮತ್ತು 'ಐಡಿಯಾಲಜಿ'–ಹೀಗೆ ಎರಡು ಹೋಳಾದದ್ದರ ಕುರಿತು ಹೇಳುತ್ತಾನೆ. ಅಂದರೆ 'ಬದುಕುವ ಬಗೆ'ಯಾಗಿದ್ದ ಧರ್ಮ ವಸಾಹತುಶಾಹಿ ಘಟ್ಟದಲ್ಲಿ ಐಡಿಯಾಲಜಿಯಾಗಿಬಿಡುತ್ತದೆ. ಧರ್ಮ ಐಡಿಯಾಲಜಿಯಾಗುವುದೆಂದರೇನೆಂಬುದನ್ನು ನಂದಿಯೇ ವಿವರಿಸುತ್ತಾನೆ: 'By ideology I mean religion as a sub-national, national or cross national identifier of populations contesting for or protecting non-religious, usually political or socioeconomic interest.' ಈ ಅರ್ಥದಲ್ಲೇ ಜಮಾತ್–ಎ–ಇಸ್ಲಾಮಿಗೆ ಧರ್ಮ ಎನ್ನುವುದು ಒಂದು ಐಡಿಯಾಲಜಿ ಮಾತ್ರ. ನಾಸ್ತಿಕನಾದ ಜಿನ್ನಾಗೆ ಇಸ್ಲಾಂ ಎನ್ನುವುದು ಧರ್ಮವಾಗಿರುವುದಿಲ್ಲ; ಬದಲಿಗೆ ಬರೇ ರಾಜಕೀಯ ಸಾಧನ ಅಥವಾ ಐಡಿಯಾಲಜಿಯಾಗಿರುತ್ತದೆ. ಅದೇ ರೀತಿಯಲ್ಲಿ ನಾಸ್ತಿಕನಾದ ಸಾವರ್ಕರ್‌ಗೆ ಹಿಂದೂ ಧರ್ಮ ಕೂಡ. ಸಾವರ್ಕರ್ ಹಾಗು ಜಿನ್ನಾ ಇಬ್ಬರಿಗೂ ಧರ್ಮ ಎನ್ನುವುದು ಕಬೀರ, ಶರೀಫ, ಬಸವಣ್ಣ ಇವರ ದೃಷ್ಟಿಯಲ್ಲಿದ್ದ ಹಾಗೆ 'ಜನರ ಧರ್ಮ'ವಾಗಿರಲಿಲ್ಲ. ಬದಲಿಗೆ,

ಉಳಿಸಿಕೊಳ್ಳಬೇಕಾದ ಅಥವಾ ಕಾಯ್ದುಕೊಳ್ಳಬೇಕಾದ 'ಪಾರ್ಟ' ಮಾತ್ರವಾಗಿತ್ತು".[೨]

ನಿತ್ಯ ತಮ್ಮದೇ ನೂರಾರು ದೈನಂದಿನ ಗೋಳುಗಳನ್ನು ತುಂಬಿಕೊಂಡು ನರಳುತ್ತಿರುವ ಜನತೆಯನ್ನು, ತಾವು ವಿರೋಧಿಗಳು ಎಂದು ನಂಬಿಕೊಂಡಿರುವ ಕೋಮಿನ ಮೇಲೆ ಆಕ್ರಮಣ ಮಾಡುವಂತೆ ಒತ್ತಾಯಿಸುತ್ತಾ, ಈ ಐಡಿಯಾಲಜಿ ಒಂದು ಹಿಮ್ಮುಖ ಚಲನೆಯ ಬೌದ್ಧಿಕ ಶಕ್ತಿಯಾಗಿ ದುಡಿಯುತ್ತದೆ. ಇಂಥ ಪ್ರತಿಯೊಂದು ಐಡಿಯಾಲಜಿಯೂ ತಾನು ಶ್ರೇಷ್ಠ ಎಂದು ತನ್ನನ್ನು ಉನ್ನತೀಕರಿಸಿಕೊಳ್ಳುತ್ತದೆ. ಪರಂಪರೆ ಸಂಸ್ಕೃತಿ, ಚರಿತ್ರೆಯನ್ನು ಕಾಯುವ ವಕ್ತಾರ ಅಂದುಕೊಂಡು ಬೀಗುತ್ತಾ, ಆ ಮೂಲಕ ತಾನು ಮಾಡುವ ಎಲ್ಲ ಬಗೆಯ ಹಿಂಸೆ, ಆಕ್ರಮಣ, ಕ್ರೌರ್ಯಗಳಿಗೂ ಒಂದು ನ್ಯಾಯಬದ್ಧತೆಯನ್ನು ಕಲ್ಪಿಸಿಕೊಂಡು ತಾನು 'ಸರಿ' ಎಂದು ಭ್ರಮಿಸುತ್ತದೆ. ಈ ರೀತಿಯ 'ಸರಿ'ಗಳನ್ನು ಮಾಡಲು ಭೀಕರ ಆಕ್ರಮಣಗಳಿಗಿಳಿಯುತ್ತದೆ. ಅದಕ್ಕಾಗಿಯೇ ರಹಮತ್ ತರೀಕೆರೆ ಹೇಳುವಂತೆ 'ಆವೇಶದಲ್ಲಿ ಹುಟ್ಟುವ ಕ್ರೌರ್ಯಕ್ಕಿಂತ ತಮ್ಮ ವರ್ಗಗಳ ಹಿತಕ್ಕಾಗಿ ಅನ್ಯರನ್ನು ನಾಶಮಾಡಲೆಂದು ರೂಪುಗೊಳ್ಳುವ ವ್ಯವಸ್ಥಿತ ಕ್ರೌರ್ಯವು ಹೆಚ್ಚು ಭೀಕರ'.[೨]

ಗುಜರಾತಿನ ಘಟನೆಯನ್ನು ರಹಮತ್ ತರೀಕೆರೆ ಈ ಬಗೆಯ ವ್ಯವಸ್ಥಿತ ಕ್ರೌರ್ಯವೆಂದೇ ವಿವರಿಸಿಕೊಂಡಿದ್ದಾರೆ.[೩] ಗುಜರಾತ್ ಉರಿದದ್ದು ಕೋಮುವಾದಿ ಸಂಘಟನೆಗಳ ಪಿತೂರಿಗಲ್ಲ; ಬದಲಾಗಿ ಒಂದು ಪ್ರಜಾಪ್ರಭುತ್ವವಾದಿ ಸರ್ಕಾರವೇ ಅದರ ಉಸ್ತುವಾರಿ ವಹಿಸಿಕೊಂಡದ್ದಕ್ಕೆ. ಈ ಕಾರಣಕ್ಕಾಗಿಯೇ ತರೀಕೆರೆ ಗುಜರಾತಿನ ಘಟನೆಯಲ್ಲಿ ದಾರುಣತೆಯನ್ನು ಕಾಣುವುದು. ಸಂಘಪರಿವಾರದ ರಾಜಕೀಯ ಮುಖವಾಣಿಯಾದ ಬಿ.ಜೆ.ಪಿ. ಬಳಗದ ಸರ್ಕಾರ ಇದ್ದದ್ದೇ ಅದಕ್ಕೆ ಕಾರಣ. ಆದರೆ ಜನತಂತ್ರ ಸರ್ಕಾರದೊಳಕ್ಕೆ ಈ ಬಗೆಯ ಜನವಿರೋಧಿ ಐಡಿಯಾಲಜಿಗಳನ್ನು ಹರಿಯಬಿಟ್ಟದ್ದಾದರೂ ಹೇಗೆ? ಹೊರಗಿನ ಎಲ್ಲ ಬಗೆಯ ಜೀವವಿರೋಧಿ ನೀತಿಗಳನ್ನು ಸಂವಿಧಾನದ ಜಾತ್ಯತೀತ ತಳಹದಿಯ ಮೇಲೆ ನಿಲ್ಲಬೇಕಾದ ಸರ್ಕಾರವೊಂದು ಚಾಲನೆಗೆ ತರಬಹುದೆ? ಇಂಥ ಹಲವು ಪ್ರಶ್ನೆಗಳು ಎದುರಾಗುತ್ತವೆ. ಜರ್ಮನಿಯ ನಾಜಿಗಳು ಮಾಡಿದ್ದನ್ನೇ ಬಿ.ಜೆ.ಪಿ. ಗುಜರಾತಿನಲ್ಲಿ ಮಾಡಿದೆ. ನಾಜಿಗಳದು ಸರ್ವಾಧಿಕಾರಿ ಪ್ರಭುತ್ವ; ಗುಜರಾತಿನದು ಪ್ರಜಾಪ್ರಭುತ್ವ ! ಸರ್ಕಾರದ ಅಥವಾ ಆಳ್ವಿಕೆಯ ಕ್ರಮ ಭಿನ್ನವಾಗಿದ್ದರೂ, ಆಕ್ರಮಣಗಳ ಮಾರ್ಗ ಒಂದೆ; ಅದು ಫ್ಯಾಸಿಸ್ಟ್ ಐಡಿಯಾಲಜಿಯಿಂದ ಜನ್ಮ ತಳೆದದ್ದು.

ಚರಿತ್ರೆಯಲ್ಲಿ ಎಂದೋ ನಡೆದ ಅಥವಾ ಜಗತ್ತಿನ ಯಾವುದೋ ಮೂಲೆಯಲ್ಲಿ ನಡೆದ ಕೃತ್ಯಗಳಿಗೆ ತನ್ನೆದುರು ಕಾಣುವವರನ್ನೇ ಹೊಣೆ ಮತ್ತು ಗುರಿ ಮಾಡಿಕೊಳ್ಳುವುದಂತೂ ಈ ಐಡಿಯಾಲಜಿಯ ತೀರ ವಿಕಾರವಾದ ನಿಲುವು. 'ಹಿಂದು' 'ಮಾತೃಭೂಮಿ' ಅನ್ನುವುದನ್ನು ರೋಮಿಲಾ ಥಾಪರ್ ' ಕಲ್ಪಿತ ಸಮುದಾಯ' ಎನ್ನುತ್ತಾರೆಂದು ನೆನಪಿಸಿಕೊಳ್ಳುತ್ತಾ

ಒಂದೆಡೆ ಜಿ. ರಾಜಶೇಖರ್ ಅವರು 'ಕನ್ನಡಿಗ', 'ರೈತರು' ಅನ್ನುವುದು ಕೂಡ ಇಂಥ ಕಲ್ಪಿತ ಸಮುದಾಯಗಳು ಎನ್ನುತ್ತಾರೆ.[೪] ರಾಮಸೇತುವಿನ ಬಗೆಗೆ ಕರುಣಾನಿಧಿಯವರ ಹೇಳಿಕೆಯನ್ನು ಕೇಳಿದ ಕೋಮುವಾದಿಗಳು ತಕ್ಷಣಕ್ಕೆ ಕಂಡ ಅಮಾಯಕ ತಮಿಳರನ್ನೇ ಹೊಣೆ ಮತ್ತು ಗುರಿ ಮಾಡಿಕೊಂಡು ಬಸ್ಸಿಗೆ ಬೆಂಕಿ ಹಚ್ಚಿದ್ದನ್ನು ಗಮನಿಸಿದರೆ, ಎಲ್ಲ ರೀತಿಯ ಕಲ್ಪಿತ ಕುಲಗಳಲ್ಲಿ ಕೆಲಸ ಮಾಡುವ ಮೂಲಭೂತವಾದೀ ಐಡಿಯಾಲಜಿ ಒಂದೇ ಎನಿಸುತ್ತದೆ. ಹಾಗಾಗಿ ತಾನು ವಿರೋಧಿಗಳೆಂದುಕೊಂಡಿರುವ 'ಕಲ್ಪಿತ ಕುಲ'ವೊಂದು ತನ್ನ ವಿರೋಧಿ ಗುಂಪಿನ ನಿರ್ದಿಷ್ಟ ವ್ಯಕ್ತಿಯ ನಡವಳಿಕೆಯನ್ನು ಇಡೀ ಸಮುದಾಯದ ನಡೆಯಾಗಿ ಕಾಣಲೆತ್ನಿಸುತ್ತದೆ. ಪಾಕಿಸ್ತಾನದ ಕೆಲವೇ ಮೂಲಭೂತವಾದಿಗಳ ಕಾರ್ಯಚಟುವಟಿಕೆಗಳು ಮತ್ತು ಆಲೋಚನೆಗಳನ್ನು ಅರ್ಥೈಸಿಕೊಳ್ಳುವ ನೆಲೆಯಲ್ಲಿಯೇ ಹಿಂದುತ್ವವಾದಿಗಳು, ಎಲ್ಲ ಭಾರತೀಯ ಮುಸ್ಲಿಮರನ್ನು ಭಾವಿಸುತ್ತಾ ಬಂದಿದ್ದಾರೆ. ಇವರಿಗೆ ಇಲ್ಲಿನ ಎಲ್ಲ ಮುಸಲ್ಮಾನರು  ಬಿನ್ ಲಾಡೆನ್ ಆಗಿ ಗೋಚರಿಸಲಾರಂಭಿಸುತ್ತಾರೆ.

ಫ್ಯಾಸಿಸಂ ದೇಶದ ಮೇಲ್ವರ್ಗಗಳ ಹಿತಾಸಕ್ತಿಯನ್ನು ರಕ್ಷಿಸಲು ತನ್ನ ವಿಚಾರಧಾರೆಯನ್ನು ಹೊಮ್ಮಿಸುವಂತೆ ಹಿಂದುತ್ವವಾದವೂ ತನ್ನ ಸಿದ್ಧಾಂತಗಳನ್ನು ಬಿತ್ತುತ್ತದೆ. ತನ್ನ ದೇಶವನ್ನು ಶ್ರೇಷ್ಠ ಅಂತಲೂ, ಅದಕ್ಕೊಂದು ಉನ್ನತವಾದ ನೆಲೆಯಿತ್ತೆಂತಲೂ, ಅದನ್ನು ತನ್ನ 'ಶತ್ರು'ಗಳು ನಾಶಮಾಡಿದರೂ ಎಂತಲೂ, ಆ ಹಳೆಯ ದಿವ್ಯವನ್ನು ಮರು ಸ್ಥಾಪಿಸಲು ಆ ಶತ್ರುಗಳನ್ನು ದಮನಮಾಡಬೇಕೆಂಬ ಚಿಂತನೆಗಳನ್ನು ಬಿತ್ತುತ್ತಾ ಬೆಳೆವ ವಿಚಾರಧಾರೆ ಇದು. ಈ ರೀತಿಯ ಚಿಂತನಾಕ್ರಮವನ್ನು ತರೀಕೆರೆ ಒಂದು ಸಮುದಾಯವನ್ನು ರಾಕ್ಷಸೀಕರಣಕ್ಕೆ ಒಳಗು ಮಾಡುತ್ತಾ, ಅದರ ನಾಶಕ್ಕೊಂದು  ನ್ಯಾಯಬದ್ಧತೆಯನ್ನು ತಂದುಕೊಳ್ಳುವ ಚಿಂತನೆ ಅನ್ನುತ್ತಾರೆ.[೫]

ಇಂಥ ರಾಕ್ಷಸೀಕರಣಗೊಳಿಸುವ ಪ್ರಕ್ರಿಯೆಯಲ್ಲಿ, ಚರಿತ್ರೆ ಮತ್ತು ವರ್ತಮಾನದಲ್ಲಿ ಕೋಮುಸಂಘರ್ಷದ ಆಕ್ರಮಣಗಳಿಗೆ ನ್ಯಾಯಬದ್ಧತೆಯನ್ನು ಸಾಬೀತುಪಡಿಸಿಕೊಳ್ಳಬಲ್ಲ ಘಟನೆ ಮತ್ತು ವ್ಯಕ್ತಿಗಳನ್ನು ಮಾತ್ರ ಹುಡುಕುವ, ಅವುಗಳನ್ನೇ ಪ್ರಚಾರ ಮಾಡುವ ಜಾಣತನ ಈ ಐಡಿಯಾಲಜಿಗಿದೆ. ಇದು ಈ ಸಂದರ್ಭವು ಘಜನಿ-ಘೋರಿಗಳನ್ನು ಮುಂದೆ ಮಾಡಿ ಟಿಪ್ಪುವನ್ನು ಮರೆತುಬಿಡುತ್ತದೆ. ಬ್ರಿಟಿಷ್ ವಿರುದ್ಧವಾಗಿ ಸೆಣಸಾಡಿ ಮಡಿದ ಟಿಪ್ಪುವಿನ ವ್ಯಕ್ತಿತ್ವವನ್ನು ಮರೆತು ಅವನನ್ನು ಧರ್ಮಾಂಧ, ಸ್ವಭಾಷಾಭಿಮಾನಿ ಎಂದು ಬಿಂಬಿಸುತ್ತದೆ. ಮತೀಯವಾದಿ ತಾತ್ವಿಕತೆಯ ಈ ಬಗೆಯ ಆಲೋಚನೆಗಳನ್ನು ಗ್ರಹಿಸಿರುವ ತರೀಕೆರೆ ಹೀಗೆ ಬರೆಯುತ್ತಾರೆ:

> ದೀನ್‌ದಾರ್ ಅಂಜುಮನ್ ಸಂಘದವರು ಚರ್ಚುಗಳನ್ನು ಆಸ್ಫೋಟಿಸಿದರು ಎಂಬ ಆರೋಪ ಬಂದಾಗ, ಸಂಘ ಪರಿವಾರ ವಿರೋಧಿಸಿತು. ಚರ್ಚುಗಳು ಅಪವಿತ್ರವಾದವು ಎಂದಲ್ಲ. ಇದನ್ನು

ಮಾಡಿದವರು ಮುಸ್ಲಿಮರು ಎಂದು ಸಾರಲು. ವಾಸ್ತವದಲ್ಲಿ ಅದು ಆಗ ಚರ್ಚುಗಳಿರಲಿ ಪಾದ್ರಿಗಳನ್ನೇ ಸುಡುವ ಕೆಲಸ ಮಾಡುತ್ತಿತ್ತು. ಅದು ತಾಲಿಬಾನ್‌ಗಳು ಬಮಿಯಾನದ ಬುದ್ಧನನ್ನು ಕೆಡವಿದಾಗಲೂ ವಿರೋಧಿಸಿತು. ಬುದ್ಧನಿಗೆ ಅಪಮಾನವಾಯಿತು ಎಂದಲ್ಲ. ಇದನ್ನು ತಾಲಿಬಾನರು ಮಾಡಿದರು ಎಂದು ಹೇಳಲು. ವಾಸ್ತವದಲ್ಲಿ ಅದು ವೈದಿಕ ಸನಾತನವಾದಿಗಳ ವಿರುದ್ಧ ಬಂಡೆದ್ದ ಬೌದ್ಧ ಧರ್ಮವನ್ನು ಈಗಲೂ ತೀವ್ರವಾಗಿ ದ್ವೇಷಿಸುತ್ತದೆ. ಒಂದೊಮ್ಮೆ ಒಂದೇ ವಿದ್ಯಮಾನದಲ್ಲಿ ಎರಡು ಮುಖಗಳಿದ್ದರೆ ಕೋಮುವಾದವು ಎಚ್ಚರಿಕೆಯಿಂದ ಅದರ ಒಂದೇ ಮುಖವನ್ನು ಬಿಂಬಿಸುತ್ತದೆ. ಉದಾಹರಣೆಗೆ ಸೆಪ್ಟೆಂಬರ್ ೧೧ ರಂದು ಪೆಂಟಗನ್ ಹಾಗೂ ವಿಶ್ವ ವ್ಯಾಪಾರ ಕೇಂದ್ರಗಳ ಮೇಲೆ ದಾಳಿಯಾದಾಗ ಅದು ಮುಸ್ಲಿಮರ ಕೃತ್ಯವೆಂದು ಖಂಡಿಸಿತು. ತಾಲಿಬಾನರು ಸ್ವತಃ ಅಮೆರಿಕದ ಸೃಷ್ಟಿ ಎಂಬ ಸಂಗತಿಯನ್ನಾಗಲಿ ಅಮೆರಿಕವು ಜಗತ್ತಿನ ಬಹುದೊಡ್ಡ ಭಯೋತ್ಪಾದಕನಾಗಿ ಬೆಳೆದು ಅನ್ಯಾಯಕೋರ ಆರ್ಥಿಕ ನೀತಿಗಳಿಂದ ಜಗತ್ತಿನ ಎಲ್ಲ ಬಡಜನರ ಕೋಪವನ್ನು ಕಟ್ಟಿಕೊಂಡಿದೆ ಎಂಬ ಪ್ರಶ್ನೆಯನ್ನಾಗಲೀ ಅದು ಮುಟ್ಟಲೇ ಇಲ್ಲ.[೬]

ಧರ್ಮಶಾಸ್ತ್ರ ಮತ್ತು ಗೋಲ್ವಾಲ್ಕರರ 'ಚಿಂತನಗಂಗಾ' ಎರಡೂ ವಿಚಾರಧಾರೆಗಳಿಂದ 'ರೂಪುಗೊಂಡಿರುವ ಹಿಂದುತ್ವವಾದದ ಸಿದ್ಧಾಂತ, ಬ್ರಾಹ್ಮಣಶಾಹಿಯ ಬೌದ್ಧಿಕ ವಸಾಹತುವಾದವೂ ಹೌದು. ಕೋಮುವಾದವು ಯಾವತ್ತೂ ಅಧಿಕಾರಶಾಹಿ, ಸಾಮ್ರಾಜ್ಯಶಾಹಿ ಹಾಗೂ ಬಂಡವಾಳಶಾಹಿಗಳ ಪರವಾದ ಚಿಂತನೆಯನ್ನು ಹೊಮ್ಮಿಸುತ್ತಾ ಬಂದಿದೆ. ಅಮೆರಿಕಾದಂಥ ರಾಷ್ಟ್ರಗಳು ಬಡ ದೇಶಗಳ ಮೇಲೆ ನಡೆಸುವ ನವವಸಾಹತೀಕರಣದ ಒಂದು ವಿಕಾರರೂಪಿ ಆವೃತ್ತಿಯಂತೆ ಕೋಮುವಾದಿ ವಿಚಾರಧಾರೆ ಕಾರ್ಯನಿರ್ವಹಿಸುತ್ತದೆ. ಕೋಮುವಾದವು ತರೀಕೆರೆ ಹೇಳುವಂತೆ "ತೋರಿಕೆಗೆ ಒಂದು ಸಮುದಾಯವನ್ನು ಗುರಿಯಾಗಿಟ್ಟುಕೊಂಡರೂ ಆಳದಲ್ಲಿ ತನ್ನ ದೇಶದ ಆಳುವ ವರ್ಗಗಳ ಹಿತಾಶಕ್ತಿ ರಕ್ಷಿಸುವ ರಾಜಕೀಯ, ಆರ್ಥಿಕ ಚಿಂತನೆಯಾಗಿದೆ. ಎಂತಲೇ ಅದು ಯಾವತ್ತೂ ಜಾಗತಿಕವಾಗಿ ವಸಾಹತುಗಳ ಅಥವಾ ಸಾಮ್ರಾಜ್ಯಶಾಹಿಗಳ ಸಖ್ಯದಲ್ಲಿರುತ್ತದೆ. ಬ್ರಿಟಿಷ್ ವಸಾಹುತಶಾಹಿ ವಿರೋಧಿ ಹೋರಾಟಗಳ ಉಚ್ಛ್ರಾಯ ಕಾಲದಲ್ಲಿ ಹುಟ್ಟಿದ ಹಿಂದು ಮಹಾಸಭಾ, ಆರೆಸ್ಸೆಸ್‌ಗಳು ಎಂದೂ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳಲಿಲ್ಲ. ಬದಲು, 'ನಮ್ಮ ಶತ್ರುಗಳು' ಬ್ರಿಟಿಷರಲ್ಲ, ಮುಸ್ಲಿಮರು' ಎಂದು ಪ್ರತಿಪಾದಿಸುತ್ತ, ಇತರರೆಲ್ಲ ಭಾರತೀಯರಿಗೆ (ಹಿಂದೂಗಳಿಗೆ) ಹೆಗಲೆಣೆಯಾಗಿ ಪ್ರಾಣದ ಹಂಗು ತೊರೆದು ಹೋರಾಡುತ್ತಿದ್ದ ಮುಸಲ್ಮಾನರನ್ನು ಗುರಿ ಮಾಡಿದವು".[೭] ಅದಕ್ಕಾಗಿಯೇ ನವವಸಾಹತೀಕರಣದ ಬಗೆಗೆ, ಜಾಗತೀಕರಣದ ಬಗೆಗೆ ಸಂಘಪರಿವಾರಗಳಿಗೆ ಕೊಂಚವೂ ಆತಂಕವಿಲ್ಲ. ಇಂಥ ಆತಂಕಗಳ ಬಗೆಗೆ ಎಚ್ಚರದಿಂದ ಚರ್ಚಿಸುವ, ಚಿಂತಿಸುವ ಪ್ರಗತಿಪರ ಹಾಗೂ ಎಡಪಂಥೀಯ ಚಳವಳಿಗಳ ಬಗೆಗೆ ಮಾತ್ರ ಕೋಮುವಾದಿಗಳ ಉಗ್ರ ವಿರೋಧವಿದೆ.

ಮತೀಯವಾದಿಗಳು ನಿರ್ದಿಷ್ಟ ಧರ್ಮ, ಸಮುದಾಯ ಅಪಾಯದಲ್ಲಿದೆ ಎಂದು ಸಾರುತ್ತಾ, ಎಚ್ಚರವಾಗುವ ಜನತೆಯಲ್ಲಿ ತನ್ನ ವಿಚಾರಧಾರೆಯನ್ನು ತುಂಬುತ್ತಾರೆ. ದೇವರು, ಧರ್ಮದ ಹೆಸರಲ್ಲಿ ಪ್ರಾಣಬಿಡಲು ಹಿಂದೇಟು ಹಾಕದ ಜನತೆ, ತಾವೆಲ್ಲ ಮೂಲತಹ ಭಿನ್ನ ಎಂಬುದನ್ನು ಮರೆತು ಒಂದು ತಕ್ಷಣದ ಏಕಾಕೃತಿಯ ಧರ್ಮದ ಎಲ್ಲೆಯನ್ನ ಕಲ್ಪಿಸಿಕೊಂಡು, ಆ ಅಪಾಯದಲ್ಲಿರುವ ಧರ್ಮವನ್ನು ರಕ್ಷಿಸಲು ಮುಂದಾಗುತ್ತಾರೆ. ಈ ಕೋಮು ವಿಚಾರಧಾರೆಯನ್ನು ಏಕಾಏಕಿ ಒಂದು ಸ್ತರದಲ್ಲಿ ತುಂಬುವುದಲ್ಲ. ಬದಲಾಗಿ ವ್ಯಕ್ತಿಯ ಪ್ರತಿಹಂತದ ಬೆಳವಣಿಗೆಯಲ್ಲೂ ತುಂಬಲಾಗುತ್ತಿದೆ.

ಮುಸ್ಲಿಂ ಮೂಲಭೂತವಾದಿಗಳು ಎಳವೆಯಿಂದಲೇ ಧಾರ್ಮಿಕ ಪಾಠಗಳನ್ನು ಕಲಿಸತೊಡಗಿದ್ದಾರೆ. ಉಗ್ರವಾದಿ ಚಟುವಟಿಕೆಗಳ ತರಬೇತಿ ಕೇಂದ್ರಗಳಿವೆ. ಸಂಘಪರಿವಾರಗಳು ಹಿಂದುತ್ವವಾದವನ್ನು ತುಂಬುವ ಕ್ರಮ ಇದಕ್ಕಿಂತ ಭಿನ್ನವಾದದ್ದು ಮತ್ತು ಜಾಣತನದ್ದು. ಅದರ ಎಲ್ಲ ಸಂಘಟನೆಗಳು ಮತ್ತವುಗಳ ಕಾರ್ಯಕ್ರಮಗಳು, ಲೋಕ ಉದ್ಧಾರಕ ಎನ್ನಿಸುವಂತೆ ಸಾಮಾನ್ಯರಲ್ಲಿ ಒಂದು ಭ್ರಮೆಯನ್ನು ಮೂಡಿಸುತ್ತವೆ. ಆದರೆ ಅದರ ಆಳದ ಗುಪ್ತ ಕಾರ್ಯಕ್ರಮ ಬೇರೆಯದೇ ಆಗಿರುತ್ತದೆ. ಜಾತ್ಯತೀತ, ಮತನಿರಪೇಕ್ಷ, ಮಾನವೀಯ ಮನಸ್ಸುಗಳಾಗಿ ಚಿಮ್ಮಬಹುದಾದ ಮಕ್ಕಳ ಮನಸ್ಸನ್ನು ವಿದ್ಯಾರ್ಥಿ ಹಂತದಲ್ಲೇ ಹಿಂದುತ್ವವಾದಿ ವಿಚಾರಧಾರೆಗಳ ಭಾಗವನ್ನಾಗಿ ಮಾಡಿಕೊಳ್ಳಲಾಗುತ್ತಿದೆ. ರಾಷ್ಟ್ರೀಯ ಸ್ವಯಂ ಸೇವಕ ಸಂಘ, ವಿಶ್ವ ಹಿಂದೂ ಪರಿಷತ್ತು, ಶಿವಸೇನೆ, ಭಜರಂಗದಳದಂಥ ಮತೀಯವಾದಿ ಸಂಘಟನೆಗಳು ಬೇರೆ ಬೇರೆ ಹಂತದಲ್ಲಿ ಹಿಂದುತ್ವದ ವಿಚಾರಧಾರೆಯನ್ನು ತುಂಬುತ್ತಾ, ರಕ್ತಕ್ಕಾಗಿ ತ್ರಿಶೂಲ ಹಿಡಿದು ಹಾತೊರೆವ ಮತೀಯ ವಿಕಾರಿಗಳನ್ನು ತಯಾರುಮಾಡುತ್ತಿವೆ.

ಮತೀಯವಾದಿ ನೋಟಕ್ರಮಗಳು ದೇಶದ ಎಲ್ಲ ಸಂಗತಿಗಳನ್ನು ತನ್ನ ಐಡಿಯಾಲಜಿಯ ಮೂಲಕವೇ ಅರ್ಥೈಸಿಕೊಳ್ಳುತ್ತವೆ. ದೇಶ, ದೇಶಭಕ್ತಿ, ಧರ್ಮ, ಹಿಂದೂ, ರಾಮ, ಸ್ತ್ರೀ ಈ ಎಲ್ಲಕ್ಕೂ ಹಿಂದೂ ಮತೀಯವಾದವು ತನ್ನದೇ ಆದ ವ್ಯಾಖ್ಯಾನಗಳನ್ನು ಕಟ್ಟಿಕೊಂಡಿದೆ. ಅಯೋಧ್ಯೆಯ ರಾಮನನ್ನು ಎಲ್ಲ ಭಾರತೀಯರು (ಹಿಂದೂವಾದಿಗಳು ಅಂದುಕೊಳ್ಳುವ ಎಲ್ಲ ಜಾತಿಗಳು ಸೇರಿಕೊಳ್ಳುವ ಹಿಂದೂ ಸಮುದಾಯ) ಪೂಜಿಸಬೇಕೆನ್ನುವುದಾದರೆ, ಇಲ್ಲಿ ಸಾವಿರಾರು ದೇವರುಗಳಲ್ಲಿ ನಂಬಿಕೆ ಇಟ್ಟು ಬದುಕುತ್ತಿರುವವರ ಗತಿಯೇನು? ಭಾರತದ ಬಹು ಸಂಸ್ಕೃತಿ ರೂಪಿಸಿರುವ ಬಹುದೊಡ್ಡ ವಿಸ್ಮಯವೆಂದರೆ ರಾಮನೇ ಹತ್ತಾರು ಕಲ್ಪನೆ, ರೂಪದಲ್ಲಿದ್ದಾನಲ್ಲವೆ! ಅಲ್ಲದೆ ರಾಮನನ್ನಲ್ಲದೆ, ರಾವಣನನ್ನೂ ದೇವರನ್ನಾಗಿ ಕಾಣುವ ಸಮುದಾಯವೂ ಇದೆಯಲ್ಲ! ಇಂಥ ಹತ್ತಾರು ಪ್ರಶ್ನೆ ಮತ್ತು ಗೊಂದಲಗಳು ಎದುರಾಗುತ್ತವೆ.

ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿಗಳು ಅನುಸರಿಸುವ ಬಲಪ್ರಯೋಗವನ್ನೇ ಅನುಸರಿಸುವ ಕೋಮುವಾದಿಗಳ ಈ ದಮನಕಾರೀ ಕ್ರಮವನ್ನು ಮಿಲಿಟರೀಕರಣ ಎಂದು ಕರೆಯುವ ತರೀಕೆರೆ ಮತೀಯವಾದಿಗಳ ಆಕ್ರಮಣಗಳನ್ನು ಹೀಗೆ ವಿವರಿಸಿಕೊಂಡಿದ್ದಾರೆ:

"ಬಲಪ್ರಯೋಗ ಅಥವಾ ಮಿಲಿಟರಿ ಶಕ್ತಿ ಪ್ರದರ್ಶನದ ಯುದ್ಧವು ಸಾಮ್ರಾಜ್ಯಶಾಹಿಯು, ಸಾಮ್ರಾಜ್ಯಶಾಹಿಗಳ ಯಾವತ್ತೂ ನೆಚ್ಚಿನ ಅಸ್ತ್ರವಾಗಿದೆ. ಅಮೇರಿಕ ಕೂಡ ಜಗತ್ತಿನ ಶಾಂತಿಪ್ರಿಯರು ವಿರೋಧಿಸುತ್ತಿದ್ದರೂ, ತನ್ನ ಹಿತಾಸಕ್ತಿಗಳಿಗೆ ಮಣಿಯದ ದೇಶಗಳನ್ನು ಮಿಲಿಟರಿ ಬಲ ಬಳಸಿ ದಮನ ಮಾಡುತ್ತದೆ. ಕೋಮುವಾದಿಗಳು ಕೂಡ ಅರೆಸೈನಿಕ ವೇಷ ಧರಿಸುತ್ತಾರೆ. ತಮ್ಮನ್ನು ಶಿವಸೈನಿಕರು ಎಂದು ಕರೆದುಕೊಳ್ಳುತ್ತಾರೆ. ರಾವಣನನ್ನು ರಾಮನ ಸೈನಿಕರಾಗಿ ಸೋಲಿಸಿದ ಹನುಮಂತನ ಹೆಸರಿನಲ್ಲಿರುವ ಭಜರಂಗದಳದ ಹೆಸರಿನ ಹಿಂದೆ ಕೂಡ ಇದೇ ಅರ್ಥವಿದೆ. ಅವರು ಸದಾ ಯುದ್ಧ ಪರಿಭಾಷೆಯಲ್ಲಿ ಮಾತಾಡುತ್ತಾ ದೇಶದ ಮಿಲಿಟರೀಕರಣವನ್ನು ಪ್ರತಿಪಾದಿಸುತ್ತಾರೆ".[೮]

ಜರ್ಮನಿಯ ಫ್ಯಾಸಿಸ್ಟ್ ಚಿಂತನೆ ಎಂದೂ ಪ್ರಜಾಪ್ರಭುತ್ವವನ್ನು ಮಾನ್ಯಮಾಡಿಲ್ಲ. ಸಂಘಪರಿವಾರವೂ ಕೂಡ ಎಲ್ಲರಿಗೂ ಸಮಾನ ಹಕ್ಕುಗಳನ್ನು ನೀಡುವ ಸಂವಿಧಾನ ಮತ್ತು ಪ್ರಜಾಪ್ರಭುತ್ವವನ್ನು ಮೀರಿಯೇ ನಡೆದಿದೆ. ಜನತಂತ್ರದಲ್ಲಿ ನಂಬಿಕೆ ಇಡದ ಈ ಐಡಿಯಾಲಜಿಗಿರುವ ಏಕೈಕ ಮಾರ್ಗ ದಮನಕಾರಿ ಬಲಪ್ರಯೋಗ. ಕೆ.ಫಣಿರಾಜ್ ಹೇಳುವಂತೆ 'ಭಾರತದ ಫ್ಯಾಸಿಸಂನ ಆವೃತ್ತಿಯು ಇಟಲಿ ಅಥವಾ ಜರ್ಮನಿಗಿಂತ ತುಂಬಾ ಭಿನ್ನವಾಗಿದ್ದು, ಪ್ರಜಾಪ್ರಭುತ್ವದ ಹಂದರದಲ್ಲೇ ಅನಾವರಣಗೊಳ್ಳುವ ಇಸ್ರೇಲಿನ ಮಾದರಿಗೆ ಹತ್ತಿರವಾಗಿದೆ'.[೯] ಇದು ಫ್ಯಾಸಿಸ್ಟ್ ಚಿಂತನೆಗಳನ್ನು ಪ್ರಭುತ್ವದೊಡನೆ ಬೆಸೆದುಬಿಡುತ್ತದೆ. ಈ ಬಗೆಯ ಬೆಸುಗೆಯಿಂದ ಪ್ರಭುತ್ವ ರಾಜಕಾರಣವನ್ನು ಗಟ್ಟಿಗೊಳಿಸಿಕೊಳ್ಳುತ್ತಾ, ಕೋಮುರಾಜಕಾರಣದ ಮೂಲಕ ತನ್ನ ಮೂಲ ಐಡಿಯಾಲಜಿಯನ್ನು ವಿಸ್ತರಿಸುತ್ತಾ ಸಾಗುತ್ತದೆ. ನಾವೆಲ್ಲ ಸಾಮಾನ್ಯವಾಗಿ ಅಧಿಕಾರದ ಕಾರಣಕ್ಕಾಗಿ ಸಂಘಪರಿವಾರ ಕೋಮುವಾದಿ ಚಿಂತನೆಗಳನ್ನು ಬಿತ್ತುತ್ತದೆ ಎಂದು ಮಾತನಾಡುತ್ತಾ ಅದರ ಮೂಲ ಆಶಯಗಳನ್ನು ಮರೆಯುತ್ತಿದ್ದೇವೆ. ಕೋಮುವಾದಿಗಳಿಗೆ ರಾಜಕೀಯ ಅಧಿಕಾರ ಬೇಕಾಗಿರುವುದು, ಅದರ ಕ್ರೌರ್ಯಗಳನ್ನು ಸುಲಭವಾಗಿ ಮತ್ತು ಭೀಕರವಾಗಿ ನಡೆಸಲು ಅಷ್ಟೇ. ಇದು ಎರಡು ದಿಕ್ಕಿನಲ್ಲಿ ಬಲಿಯುವ ವಿಭಿನ್ನ ರಚನೆ. ಕೋಮುವಾದಿ ಚಿಂತನೆಗಳಿಂದ ರಾಜಕೀಯ ಅಧಿಕಾರ ದಕ್ಕಿಸಿಕೊಳ್ಳುವ, ಪ್ರಜಾಪ್ರಭುತ್ವಕ್ಕೆ ಫ್ಯಾಸಿಸ್ಟ್ ಚಿಂತನೆಗಳನ್ನು ಬೆಸೆದು ಆ ಮೂಲಕ ಮತ್ತೆ ಮತೀಯವಾದಿ ಸತ್ವಗಳನ್ನು ತುಂಬುವ ರಚನೆ. ಈ ಬಗೆಗೆ ಕೆ. ಫಣಿರಾಜ್ ಹಿಂದುತ್ವದ ಬೆಳವಣಿಗೆಯನ್ನು ವಿಶೇಷವಾಗಿ ಅಧ್ಯಯನ ಮಾಡಿರುವ ಕ್ರಿಸ್ಟೋಫ್ ಜೆಫ್ರೋಲೇಟ್ ಅವರ ಮಾತನ್ನು ನೆನಪಿಸಿಕೊಳ್ಳುತ್ತಾ ಹೀಗೆ ಹೇಳುತ್ತಾರೆ: "ಬಿ.ಜೆ.ಪಿ.ಯು ಸಂಘಪರಿವಾರ ರೂಢಿಸಿದ ಸಾಮಾಜಿಕ ಯಜಮಾನಿಕೆಯ ಬುನಾದಿಯ ಮೇಲೆ ತನ್ನ ರಾಜಕೀಯವನ್ನು ಸಂಘಟಿಸುವುದನ್ನು ನಾವು ಗಮನಿಸಬೇಕು. ಹಿಂದುತ್ವವಾದದ ಬೆಳವಣಿಗೆಯನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿರುವ ವಿದ್ವಾಂಸ ಕ್ರಿಸ್ಟೋಫ್ ಜೆಫ್ರೋಲೇಟ್-ಸಂಘಪರಿವಾರ ಯಾವತ್ತೂ ಸಾಮಾಜಿಕ ಅಧಿಕಾರಕ್ಕೆ ಹೆಚ್ಚು ಮಹತ್ವ ಕೊಡುತ್ತದೆ: ರಾಜಕೀಯ ಅಧಿಕಾರವೇನಿದ್ದರೂ ಅದು ಸಾಮಾಜಿಕ ಯಜಮಾನಿಕೆಯನ್ನು ಗಟ್ಟಿಗೊಳಿಸುವಷ್ಟರ ಮಟ್ಟಿಗೆ ಮಾತ್ರ ಉಪಯುಕ್ತ ಎಂಬ ವಿಚಾರದ ನೆಲೆಯಲ್ಲಿ ಸಂಘಪರಿವಾರ ಕಾರ್ಯಾಚರಣೆ ನಡೆಸುತ್ತದೆ ಎಂದು

ಹೇಳುತ್ತಾರೆ".[೮]

ಈ ಮತೀಯವಾದಿ ಐಡಿಯಾಲಜಿಯ ನಡುವೆ ನಾವು ಮತ್ತೊಂದು ಬೆಳವಣಿಗೆಗೆ ಭಯಪಡಬೇಕಿದೆ. ಮತೀಯವಾದಿ ವಿಚಾರಧಾರೆಗಳಿಂದ ಪ್ರೇರಿತವಾದ ರಾಜಕಾರಣಕ್ಕೆ ನಾವೆಲ್ಲ ಆತಂಕಪಡಬೇಕಾದದ್ದು ನಿಜ. ಆದರೆ ಕೋಮುವಾದಿ ಪಕ್ಷ ಎಂದು ಸಾರ್ವಜನಿಕವಾಗಿ ಸಾರಿಕೊಂಡು ಸಾಗುವ ಬಿ.ಜೆ.ಪಿ.ಯ ಮತೀಯವಾದಿ ತಂತ್ರಗಳನ್ನೇ ಇನ್ನಿತರ ಎಲ್ಲ ರಾಜಕೀಯ ಪಕ್ಷಗಳು ಪ್ರತಿದಾಳದಂತೆ ಉರುಳಿಸುತ್ತಿವೆ. ಈ ಬೆಳವಣಿಗೆ ನಮ್ಮನ್ನು ಮತ್ತಷ್ಟು ಆತಂಕಕ್ಕೆ ನೂಕುತ್ತಿದೆ. ಹಿಮಾಚಲ ಪ್ರದೇಶದ ಚುನಾವಣಾ ಸಂದರ್ಭದಲ್ಲಿ ವಿರೋಧ ಪಕ್ಷಗಳು ವಾಜಪೇಯಿಯವರು ಗೋಮಾಂಸ ತಿನ್ನುತ್ತಾರೆಂದು, ಅವರ ಆಹಾರಕ್ರಮವನ್ನು ರಾಜಕೀಯ ಪ್ರಚಾರಕ್ಕೆ ಉಪಯೋಗಿಸುವ ತಂತ್ರಗಾರಿಕೆಗಳನ್ನು ಗಮನಿಸಿದರೆ ಬಿ.ಜೆ.ಪಿ.ಯೇತರ ರಾಜಕೀಯ ಪಕ್ಷಗಳು, ಜಾತ್ಯತೀತ ಅಂತ ಕರೆದುಕೊಂಡರೂ, ಆಳದಲ್ಲಿ ಕೋಮುವಾದಿ ತಂತ್ರಗಾರಿಕೆಯ ರಾಜಕಾರಣವನ್ನೆ ಮಾಡುತ್ತಿವೆ ಎಂಬುದು ತಿಳಿಯದೆ ಇರದು. ವಿರೋಧ ಪಕ್ಷಗಳಿಗೆ ರಾಜಕಾರಣಕ್ಕಾಗಿ ಕೋಮುವಾದ ಉಪಯೋಗಕ್ಕೆ ಬರುತ್ತಿರುವಷ್ಟು, ಸ್ವತಃ ಬಿ.ಜೆ.ಪಿ.ಗೆ ಅಗತ್ಯವಿಲ್ಲವೇನೋ ಎನ್ನುವ ಅನುಮಾನ ಮೂಡುತ್ತದೆ.

**ಕೊನೆ ಟಿಪ್ಪಣಿಗಳು**

೧. ನಟರಾಜ್ ಹುಳಿಯಾರ್, 'ಹಳೆಯ ದೇವರುಗಳೆಲ್ಲಾ ಸತ್ತು...', ಮತೀಯವಾದದ ಮುಖಗಳು, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ. ಪುಟ: ೨.
೨. ರಹಮತ್ ತರೀಕೆರೆ, 'ಕೋಮುವಾದ: ಮುಖಾಮುಖಿ ಹೇಗೆ ?' ಸಂ: ಬಿಸ್ಲೇಹಳ್ಳಿ ಪ್ರಭು, ಎಚ್.ಆರ್. ಸ್ವಾಮಿ, 'ಮಾನವತೆಯ ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್. ಪುಟ: ೧೮೧.
೩. ಅದೇ.
೪. ಜಿ. ರಾಜಶೇಖರ್ 'ರಥಯಾತ್ರೆಯ ರಾಜಕೀಯ', ರಥಯಾತ್ರೆಯ ರಾಜಕೀಯ. ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ.
೫. ರಹಮತ್ ತರೀಕೆರೆ, 'ಕೋಮುವಾದ: ಮುಖಾಮುಖಿ ಹೇಗೆ?', ಸಂ: ಬಿಸ್ಲೇಹಳ್ಳಿ ಪ್ರಭು, ಎಚ್.ಆರ್. ಸ್ವಾಮಿ, 'ಮಾನವತೆಯ ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್. ಪುಟ: ೧೮೨.
೬. ಅದೇ, ಪುಟ: ೧೮೩.
೭. ಅದೇ, ಪುಟ: ೧೮೫.
೮. ಅದೇ, ಪುಟ: ೧೯೩.
೯. ಕೆ. ಫಣಿರಾಜ್; 'ಕೋಮುವಾದದ ಸ್ವರೂಪ ಮತ್ತು ಆತಂಕ', ಸಂ: ಬಿಸ್ಲೇಹಳ್ಳಿ ಪ್ರಭು, ಎಚ್.ಆರ್. ಸ್ವಾಮಿ, 'ಮಾನವತೆಯ ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್. ಪುಟ: ೨೦೮.
೧೦. ಅದೇ, ಪುಟ: ೨೦೩.

# ಅಧ್ಯಾಯ ೩

## ಮತೀಯವಾದಿ ಲಾಂಛನಗಳಾಗುವ ಪಾರಂಪರಿಕ ಪ್ರತಿಮೆಗಳು

ಜನ ಸಮುದಾಯವನ್ನು ಕೆರಳಿಸಿ ಅರಾಜಕತೆಯನ್ನು ಸೃಷ್ಟಿಸಲು ಹವಣಿಸುವ ಮತೀಯವಾದಿಗಳು ಆ ಜನರ ನಂಬಿಕೆಯ ಭಾಗವಾಗಿರುವ ಸಾಂಸ್ಕೃತಿಕ ಹಾಗೂ ಪಾರಂಪರಿಕ ಪ್ರತಿಮೆಗಳನ್ನು ತಮ್ಮ ಮತೀಯ ಲಾಂಛನಗಳನ್ನಾಗಿ ರೂಪಿಸಲೆತ್ನಿಸುತ್ತಾರೆ. ಹಬ್ಬ, ಆಚರಣೆ, ಮಂದಿರ, ಮಸೀದಿ, ಪ್ರಾರ್ಥನಾ ಮಂದಿರದಂಥ, ಸಾಂಸ್ಕೃತಿಕ ಕಟ್ಟಡಗಳು, ಸ್ಥಳಪುರಾಣ–ಇವೆಲ್ಲವೂ ತಮ್ಮ ಉದಾರವಾದ ಸಾಮರಸ್ಯರೂಪಿ ನೆಲೆಗಳನ್ನು ಕಳೆದುಕೊಂಡು ಮತೀಯವಾದಿಗಳ ಶಕ್ತಿ ಕೇಂದ್ರಗಳಾಗಿಬಿಡುತ್ತವೆ. ಮೂಲಭೂತವಾದೀ ಚಿಂತನೆಗಳಿಗೆ ಗಟ್ಟಿತನವನ್ನು ತಂದುಕೊಡುವ ಹಾಗೂ ಅವರಿಗೊಂದು ರಾಜಕೀಯ ಬಲವನ್ನು ದಕ್ಕಿಸಿಕೊಡುವ ಭಿಕ್ಷಾಪಾತ್ರೆಗಳಾಗಿಬಿಡುತ್ತವೆ. ಭಾರತ ಬಹುಮುಖಿ ಸಂಸ್ಕೃತಿಯ ನಾಡು ಎಂಬುದನ್ನು ಒಂದು ಕ್ಷಣ ಮರೆವ ಜನತೆ, ಕೋಮುವಾದಿಗಳು ಬಿಂಬಿಸುವ ಈ ಲಾಂಛನರೂಪಿ ಮತಾಂಧತೆಗೆ ಸುಲಭವಾಗಿ ಬಲಿಯಾಗಿಬಿಡುತ್ತಾರೆ. ದೇವರು, ಧರ್ಮ, ಹಬ್ಬ, ಆಚರಣೆ, ಜಾತ್ರೆಗಳ ವಿಷಯದಲ್ಲಿ ಬಹುಬೇಗ ಸೆಳತಕ್ಕೆ ಒಳಗಾಗುವ ಜನತೆಯ ಅಜ್ಞಾನ ಮತೀಯವಾದಿಗಳಿಗೆ ಬಹುದೊಡ್ಡ ಲಾಭವಾಗಿದೆ.

ಭಾರತದಲ್ಲಿ ರಾಮನಿರಲಿ, ರಾವಣನನ್ನೂ ಪೂಜಿಸುವ ಕಿರು ಸಮುದಾಯಗಳಿವೆಯಲ್ಲ! ದೇವರನ್ನೇ ಅಲ್ಲ, ಭೂತಗಳನ್ನು ಆರಾಧಿಸುವವರು ನಮ್ಮ ಕರಾವಳಿಯಲ್ಲಿದ್ದಾರೆ. ಇವತ್ತು ರಾಮನ ಹೆಸರಿನಲ್ಲಿ ಹಿಂದುತ್ವವಾದಿಗಳು, ಕ್ರಿಶ್ಚಿಯನ್ನರು ಮತಾಂತರ ಮಾಡುತ್ತಿದ್ದಾರೆ ಎಂದು ಹುಸಿ ಚೀರಾಟ ಮಾಡುತ್ತಾ ಪಾದ್ರಿಗಳನ್ನು ಜೀವಂತ ಸುಡುತ್ತಾ, ಕ್ರೈಸ್ತ ಸನ್ಯಾಸಿನಿಯರ ಮೇಲೆ ಅತ್ಯಾಚಾರ ಮಾಡುತ್ತಿದ್ದಾರೆ. ಸ್ವಂತ ನೆಲವನ್ನು ಉತ್ತಿ ಬಿತ್ತಲು ಹಂಬಲಿಸಿದ ಚೋಮ, ನೀಚ ಜಾತಿ ವ್ಯವಸ್ಥೆಯಲ್ಲಿ ಹೊಲವನ್ನು ಪಡೆಯಲಾಗದೆ ಪರಿತಪಿಸುತ್ತಾನೆ. ಕೊನೆಗೆ ತನಗೂ ಭೂಮಿ ಕೊಡುವ ಕಿಲಿಸ್ತರ ಮತಕ್ಕೆ ಸೇರಿಕೊಳ್ಳಲು ದಾಪುಗಾಲು ಹಾಕುತ್ತಾನೆ. ಹಾದಿ ಮಧ್ಯದಲ್ಲೇ ಅವನು ವಾಪಸ್ಸಾಗುವುದು ರಾಮನ ಮೇಲಿನ ನಂಬಿಕೆಯಿಂದಲ್ಲ; ಅವನು ನಂಬಿರುವ ಭೂತ, ಪಂಜುರ್ಲಿಯ ಮೇಲಿರುವ ಪ್ರೀತಿ ಮತ್ತು ಭಯದಿಂದ ಎಂಬುದನ್ನು ನಾವು ಸುಲಭವಾಗಿ ಮರೆಯಬಾರದು.

ಹಿಂದೂ ಮತೀಯವಾದಿಗಳು ರಾಮಮಂದಿರ, ದತ್ತಪೀಠ, ಚೆನ್ನಮ್ಮನ ಮೈದಾನ ಎಂದರೆ, ಮುಸ್ಲಿಂ ಮತೀಯವಾದಿಗಳು ಬಾಬರಿ ಮಸೀದಿ, ಬಾಬಬುಡನ್‌ಗಿರಿ, ಈದ್ಗಾ ಮೈದಾನ ಎನ್ನುತ್ತಾರೆ. ಹಿಂದೂ ಮತೀಯವಾದಿಗಳು ಕನ್ಯಾಕುಮಾರಿ ಎಂದರೆ ಕ್ರೈಸ್ತ ಮೂಲಭೂತವಾದಿಗಳು ಕನ್ನಿಮೇರಿ ಎನ್ನುತ್ತಾರೆ. ಹಿಂದೂ ಮೂಲಭೂತವಾದಿಗಳು ತಾಜ್‌ಮಹಲನ್ನೆ ತೇಜ್ ಮಹಲ್ ಅನ್ನುತ್ತಾರೆ. ಮುಸ್ಲಿಂ ಮೂಲಭೂತವಾದಿಗಳು ಕಾಶ್ಮೀರದಲ್ಲಿ ಅಲ್ಲೆಲ್ಲೊ ಮಹಮದ್ ಪೈಗಂಬರನ ಕೂದಲಿದೆ ಎನ್ನುತ್ತಾರೆ. ರಾಮಸೇತುವಿನ ಬಗೆಗೆ ವೈಜ್ಞಾನಿಕ ಸಂಶೋಧನಾ ವರದಿಗಳು ಒಂದನ್ನು ಹೇಳಿದರೆ, ಹಿಂದೂ ಕೋಮುವಾದಿಗಳು ಅದು ರಾಮನೇ ಸೀತೆಯನ್ನು ಕರೆತರಲು ತನ್ನ ವಾನರ ಸೇನೆಯ ನೆರವಿನಿಂದ ರೂಪಿಸಿದ್ದು' ಅನ್ನುತ್ತಾರೆ. ಕ್ರೈಸ್ತ ಮೂಲಭೂತವಾದಿಗಳು ಅದು ಸ್ವತಃ ಆ್ಯಡಂ ನಿರ್ಮಿಸಿದ ಆ್ಯಡಂ ಸೇತುವೆ ಎನ್ನುತ್ತಾರೆ.

ಈ ಬಗೆಯ ಪ್ರಕ್ರಿಯೆಗಳಿಂದ ನಾವು ನಮ್ಮ ನಿಜ ಸಂಕೇತಗಳನ್ನು ಕಳೆದುಕೊಳ್ಳುತ್ತಿದ್ದೇವೆ. ತ್ಯಾಗಕ್ಕೆ ಸಂಕೇತವಾಗಿ ನಮ್ಮ ತ್ರಿವರ್ಣ ಧ್ವಜದಲ್ಲಿ ಸೇರಿಕೊಂಡ 'ಕೇಸರಿ' ವರ್ಣಕ್ಕೆ ಹಿಂದೂ ಮತೀಯವಾದಿಗಳು ವಾರಸುದಾರರಾಗಿದ್ದಾರೆ. ನಮ್ಮ ಜನಪದ ಸಂಸ್ಕೃತಿಯಲ್ಲಿ ' ಪುರುಷ ಪ್ರಭುತ್ವಗಳನ್ನು ಮೀರುವ ಪರಂಪರೆಗೆ ಹೆಸರಾಗಿರುವ ಕಾಳಿ, ಚಂಡಿಯರಂಥ ಸ್ತ್ರೀ ದೇವತೆಗಳು ದುಷ್ಟರನ್ನು ಶಿಕ್ಷಿಸಲು ಬಳಸಿದ ಪೌರಾಣಿಕ ಪ್ರತಿಮೆಯಾದ ತ್ರಿಶೂಲ, ಗರ್ಭಿಣಿ ಹೆಂಗಸರ ಹೊಟ್ಟೆಯನ್ನು ಸೀಳಿ, ಭ್ರೂಣವನ್ನೂ ಕೊಲ್ಲುತ್ತಿರುವ ದುಷ್ಟರ ಕೈಯಲ್ಲಿದೆ. ಪಂಪನ 'ಆದಿಪುರಾಣ'ದಲ್ಲಿ ಒಂದು ಕಥೆ ಇದೆ. ವಜ್ರದಂತ ಒಬ್ಬ ಚಕ್ರವರ್ತಿ. ಇವನು ಶ್ರೀಮತಿಯ ತಂದೆ, ವಜ್ರಜಂಘನ ಮಾವ. ಒಂದು ದಿನ ಅರಮನೆಯ ಸಿಂಹಾಸನದ ಮೇಲೆ ಸುಖವಾಗಿ ಕುಳಿತಿರುವ ವಜ್ರದಂತನಿಗೆ, ಉದ್ಯಾನಪಾಲಕ ಒಂದು ಬಿರಿದ ಕಮಲದ ಹೂವನ್ನು ತಂದುಕೊಡುತ್ತಾನೆ. ಚಕ್ರವರ್ತಿ ಅದರ ಪರಿಮಳವನ್ನು ಸವಿಯುತ್ತಿರಬೇಕಾದರೆ, ಕಮಲದ ದಳಗಳಡಿಯಲ್ಲಿ ಸಿಕ್ಕಿ ಸತ್ತ ದುಂಬಿಯೊಂದು ಕಾಣಿಸುತ್ತದೆ. ಸೂರ್ಯ ಮುಳುಗಿದಾಗ ಕಮಲದ ಬಾಹುಗಳು ಮುದುಡಿಕೊಳ್ಳುತ್ತವೆ ಎಂಬ ಎಚ್ಚರವನ್ನು ಮರೆತು ಹಿಂದಿನ ದಿನ ಸಂಜೆ ಮೈಮರೆತು ಆ ಕಮಲದ ಮಕರಂದ ಹೀರುತ್ತಿದ್ದ ದುಂಬಿಯದು. ಇದನ್ನರಿತ ವಜ್ರದಂತ ಆ ಕ್ಷಣವೇ ಇಂದ್ರಿಯ ಸುಖಗಳ ಅನಿತ್ಯತೆಯನ್ನರಿತು, ಎಲ್ಲ ಅಧಿಕಾರಗಳನ್ನು ತೊರೆದು ತಪಸ್ಸಿನ ಕಡೆಗೆ ಸಾಗುತ್ತಾನೆ. ವಜ್ರದಂತನಲ್ಲಿ ಹೀಗೆ ಲೋಕಾತೀತವಾದ ದಿವ್ಯ ವಿವೇಕದ ಮಿಂಚನ್ನು ಹೊಳೆಸಿದ ಆ ಕಮಲ ಇಂದು ಅಧಿಕಾರ ಕೇಂದ್ರದ ಲಾಂಛನವಾಗಿದೆ.

ಅಸಂಖ್ಯ ಜನಪದರು ಮತ್ತು ಶಿಷ್ಟ ಪರಂಪರೆಯ ಸಾಹಿತ್ಯ ವಿದ್ಯಾರ್ಥಿಗಳು ರಾಮಾಯಣದ ಹತ್ತಾರು ಪಠ್ಯಗಳ ಮೂಲಕ ರಾಮನ ಬಗೆಗೆ ಕಟ್ಟಿಕೊಂಡಿದ್ದ ನೂರಾರು ಉದಾತ್ತ ಪ್ರತಿಮೆಗಳು, ಸಂಘಪರಿವಾರಗಳ ರಾಮನಿಂದಾಗಿ ಸ್ಥಾನಪಲ್ಲಟವಾಗಿಬಿಟ್ಟಿವೆ.

ಇನ್ನು ಹಬ್ಬ, ಜಾತ್ರೆಗಳೆಂದರೆ ಮತೀಯವಾದಿಗಳಿಗೆ ಎಲ್ಲಿಲ್ಲದ ಪ್ರೀತಿ. ಅವರ ಆಕ್ರಮಣಗಳಿಗೆ ಬೇಕಾದ ಅರಾಜಕತೆಯನ್ನು ಇಂಥ ಹಬ್ಬ ಆಚರಣೆಗಳನ್ನು ಬಿಟ್ಟರೆ ಇನ್ಯಾವೂ ಒದಗಿಸಲಾರವು. ಅದಕ್ಕಾಗಿ ಕೋಮುವಾದಿಗಳು ಹಬ್ಬ, ಮೆರವಣಿಗೆಗಳನ್ನು ಇನ್ನೊಬ್ಬರ ಕಣ್ಣು ಕುಕ್ಕುವಂತೆ ಅದ್ದೂರಿಯಾಗಿ ಆಚರಿಸಲೆತ್ನಿಸುತ್ತಾರೆ.

ಎಲ್ಲ ಮತ ಧರ್ಮಗಳಲ್ಲೂ ನಿರ್ದಿಷ್ಟ ಸಾಂಸ್ಕೃತಿಕ ಹಾಗೂ ದೈವಿಕ ಹಬ್ಬ, ಆಚರಣೆ, ನಂಬಿಕೆಗಳಿವೆ. ಇವೇ ಆ ಮತಧರ್ಮಗಳಿಗೊಂದು ಹೊರಗೆ ಕಾಣಿಸುವ ಆಕಾರವನ್ನು ನೀಡಿವೆ. ಅಥವಾ ಧರ್ಮಗಳೇ ತಮಗೊಂದು ಶಾರೀರಿಕ ಸ್ವರೂಪವನ್ನು ಈ ಹಬ್ಬ, ಆಚರಣೆಗಳ ಮೂಲಕ ತಂದುಕೊಂಡಿವೆ. ಇವೆಲ್ಲವು ಮನುಷ್ಯನ ಪ್ರೀತಿಯ ನೆಮ್ಮದಿಯ ಕ್ಷಣಗಳು. ದೀಪಾವಳಿ, ಯುಗಾದಿ, ಸಂಕ್ರಾಂತಿ–ಈ ಹಬ್ಬಗಳಿಗೂ ನೆಲಮೂಲ ಸಂಸ್ಕೃತಿಯ ಜನಸಮೂಹಕ್ಕೂ ಆಳವಾದ ಅರ್ಥಪೂರ್ಣ ಸಂಬಂಧವಿದೆ. ಹಾಗೆಯೇ ಎಲ್ಲ ಧರ್ಮೀಯರ ಹಬ್ಬಗಳಿಗೂ ಅವರವರ ಬದುಕಿಗೂ ಸಂಬಂಧ ಇದೆ. ಇಂಥ ಹಬ್ಬ ಆಚರಣೆಗಳು ಮತೀಯವಾದಿಗಳಿಗೆ ಅನ್ಯ ಮತೀಯರನ್ನು ಕೆಣಕುವ, ಬಡಿಯುವ ಅವಕಾಶಗಳಾಗಿಬಿಟ್ಟಿವೆ. ನಮಗೆ ಹಬ್ಬಗಳ ಬಗೆಗೆ ಆಧುನಿಕಪೂರ್ವ ಸಂದರ್ಭದಲ್ಲಿದ್ದ ನೆಮ್ಮದಿ, ಒಂದು ಬಗೆಯ ಆಧ್ಯಾತ್ಮಿಕ ಪ್ರೀತಿ ಮತ್ತೆ ತಿರುಗಿ ಬರಬೇಕಾಗಿದೆ. ಹಬ್ಬಗಳು, ದೇವರು ನಮ್ಮ ಮತೀಯ ದ್ವೇಷದ ಪ್ರತೀಕಗಳು ಎಂಬುದನ್ನು ಮರೆಯಬೇಕಾಗಿದೆ. ಅವುಗಳಿಂದ ಹೊಸ ಹುರುಪು, ಶಕ್ತಿ, ಚೈತನ್ಯಗಳನ್ನು ಪಡೆಯುತ್ತಾ ಜೀವಪರವಾಗಿ ಆಲೋಚಿಸಬೇಕಾಗಿದೆ. ಡಿ.ಆರ್. ನಾಗರಾಜ್ ಹೇಳುವಂತೆ 'ಧರ್ಮಗಳು ಮತ್ತು ಅದರ ಸಂಕೇತಗಳು ಮಾನವನ ಕಾಲ–ದೇಶಾತೀತ ಅನುಭವಗಳಾಗಿ ಕಂಡಾಗ ಅವಕ್ಕೆ ದೊಡ್ಡ ರೋಮಾಚನ ಶಕ್ತಿ ಇರುತ್ತದೆ. ಅಲ್ಲಿ ಮನುಷ್ಯನ ಎಲ್ಲ ಸೆಳೆತಗಳೂ ಅಡಕಗೊಂಡಿರುತ್ತದೆ. ಪ್ರೇಮ, ಕಾಮ, ಅತೀತದ ಆಕರ್ಷಣೆ ಹೀಗೆ ಎಲ್ಲ ನಿಗೂಢಗಳೂ ಅಡಕಗೊಂಡಿರುತ್ತವೆ. ಹೀಗೆ ಧರ್ಮವು ಮನುಷ್ಯನ ಆರ್ಕಿಟೈಪಲ್ ಅನುಭವಗಳಾಗಿ ನಿಂತಾಗ ಅವು ಮಾನವರಿಗೆ ಜೀವದಾಯಕವಾದ ನೇತ್ರಗಳು, ಅಗತ್ಯವಾಗಿ ಬೇಕಾದ ಕನಸುಗಳು'.[೧]

ಮಾನವನಿಗೆ ಧರ್ಮ, ದೇವರು, ಹಬ್ಬ, ಆಚರಣೆ, ನಂಬಿಕೆಗಳ ಬಗೆಗೆ ವಿಶಿಷ್ಟವಾದ ಭಯ ಮತ್ತು ಆಕರ್ಷಣೆ ಒಟ್ಟಿಗೇ ಇದೆ. ಈ ಭಯ ಮತ್ತು ಆಕರ್ಷಣೆಯನ್ನೇ ಕೋಮುವಾದಿಗಳು ಒಂದು ಮತೀಯ ಶಕ್ತಿಯನ್ನಾಗಿ ಮಾಡಿಕೊಂಡು ತಮ್ಮ ಧರ್ಮ, ದೇವರ ಬಗೆಗೆ ಭಯ ಪಡದ, ನಿರಾಸಕ್ತಿ ತೋರುವ ಮತ್ತೊಂದು ಸಮುದಾಯವನ್ನು ನಿರ್ನಾಮ ಮಾಡಲು ಬಯಸುತ್ತಾರೆ. ಹೀಗೆ ಎರಡು ಕೋಮುಗಳಿಗಿರುವ ಪರಸ್ಪರ ಆಕರ್ಷಣೆ ಮತ್ತು ತಿರಸ್ಕಾರದಿಂದ ಹೊರಡುವ ದ್ವೇಷವನ್ನೇ ಆಧುನಿಕ ಕೋಮುವಾದಿ ರಾಜಕಾರಣ ಒಂದು ಪರಿಣಾಮಕಾರಿ ಆಯುಧವನ್ನಾಗಿ ಮಾಡಿಕೊಂಡಿದೆ. ಡಿ.ಆರ್. ನಾಗರಾಜ್ 'ಮೋದಕಪ್ರಿಯ ವಿನಾಯಕ ತಿಲಕರ ಕೈಗೆ ಸಿಕ್ಕು ಬೆಂಕಿ ಉಗಿವ ರಾಷ್ಟ್ರೀಯವಾದಿ ರಾಜಕಾರಣಿಯಾದದ್ದು ಹೀಗೆಯೇ. ಕಡುಬು ತಿನ್ನುತ್ತಾ ತಮಾಷೆಯಾಗಿ ಕಾಲಕಳೆವ ವಿನಾಯಕ ಕತ್ತಿ ಹಿಡಿದು ಬೀದಿಗಳಲ್ಲಿ ಮೆರೆಯುತ್ತಾನೆ. ಶಿವಮೊಗ್ಗದಂಥ ಊರುಗಳಲ್ಲಿ

ಮತೀಯ ಗಲಭೆ ಶುರುಮಾಡುವ ತರಲೆ ಗಣಪತಿಯಾಗಿಬಿಡುತ್ತಾನೆ' ಎನ್ನುತ್ತಾರೆ.[೨] ಇವನು ಈ ವರ್ಷವೂ ಗಂಗಾವತಿ ಮತ್ತು ಶ್ರೀರಂಗಪಟ್ಟಣಗಳಲ್ಲಿ ತನ್ನ ವರಸೆಯನ್ನು ತೋರಿಸಿದ್ದಾನೆ.

ಹಬ್ಬ, ಮೆರವಣಿಗೆಗಳಿಂದ ಸೀಮಿತವಾದ ಒಂದು ಪ್ರಾದೇಶಿಕ ಮತೀಯ ಕ್ಷೋಭೆಯನ್ನು ಹುಟ್ಟುಹಾಕಿದವರೇ ರಾಮ ಮಂದಿರ, ಬಾಬಾಬುಡನ್‌ಗಿರಿಯ ದತ್ತಪೀಠ, ರಾಮಸೇತುವಿನಂಥ ಸಾಂಸ್ಕೃತಿಕ ಪ್ರತಿಮೆಗಳಿಗೆ ಮತೀಯ ಬಣ್ಣ ಬಳಿಯುತ್ತಾರೆ. ರಾಮ ಮಂದಿರ ವಿವಾದವನ್ನು ಇಪ್ಪತ್ತನೆಯ ಶತಮಾನದ ಭಾರತದ ಒಂದು ರಾಷ್ಟ್ರೀಯ ರೋಗವನ್ನಾಗಿ ಆಹ್ವಾನಿಸಿಕೊಂಡಿದ್ದಾರೆ. ರಾಮಮಂದಿರ ವಿವಾದದ ಬಗೆಗೆ ಕನ್ನಡ ಚಿಂತನೆ ವ್ಯಾಪಕವಾಗಿ ಚರ್ಚಿಸಿದೆ. ಹಲವು ವಿಶೇಷ ಗ್ರಹಿಕೆಗಳನ್ನು, ಒಳನೋಟಗಳನ್ನು ನೀಡಿದೆ. ಅದಕ್ಕಾಗಿ ಅದನ್ನೇ 'ರಾಮ ಮತ್ತು ರಾಜಕಾರಣ' ಎಂಬ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ. ಈ ಅಧ್ಯಾಯದಲ್ಲಿ ಬಾಬಬುಡನ್‌ಗಿರಿ ದತ್ತಪೀಠ ಹಾಗೂ ಇತ್ತೀಚಿನ ವಿವಾದ ರಾಮಸೇತುಗಳನ್ನು ಕುರಿತಾಗಿ ಚಿಂತಿಸಲೆತ್ನಿಸುತ್ತೇನೆ.

### ೩.೧ ಸಾಮರಸ್ಯದ ಸಂಕೇತ: ಬಾಬಾಬುಡನ್‌ಗಿರಿ

ಬಾಬಾಬುಡನ್‌ಗಿರಿ ಹಿಂದೂ ಹಾಗೂ ಮುಸ್ಲಿಮರ ಶ್ರದ್ಧಾ ಕೇಂದ್ರವಾಗಿದೆ. ಹಿಂದೂ, ಮುಸ್ಲಿಮರೆನ್ನುವುದಕ್ಕಿಂತ ಮೂಲತಃ ಇದು ದತ್ತ ಪಂಥ ಹಾಗೂ ಸೂಫಿ ಪಂಥಗಳ ಮುಖ್ಯ ಕೇಂದ್ರಗಳಲ್ಲೊಂದು. ಏಕೆಂದರೆ ದತ್ತಪಂಥ ಹಿಂದೂ ಅಥವಾ ವೈದಿಕ ಪರಂಪರೆಗಿಂತ ಭಿನ್ನ; ಹಾಗೆಯೇ ಸೂಫಿ ಪಂಥವು ಮೂಲಭೂತ ಇಸ್ಲಾಂಗಿಂತ ಭಿನ್ನವೇ. ಇವತ್ತು ಮುಸ್ಲಿಂ ಮೂಲಭೂತವಾದಿಗಳು ಸೂಫಿ ಪಂಥವನ್ನು ದೂರವೇ ಇಡಲೆತ್ನಿಸುತ್ತಾರೆ ಎಂಬುದನ್ನು ಗಮನಿಸಿದರೆ ಅದು ಇಸ್ಲಾಮಿಗಿಂತ ಎಷ್ಟು ದೂರ ಎಂಬುದು ಹೊಳೆಯುತ್ತದೆ.

ಸೂಫಿ ತತ್ವವು ಮೂಲತಃ ಎಲ್ಲ ಧಾರ್ಮಿಕ, ಆಧ್ಯಾತ್ಮಿಕ ಚಿಂತನೆಗಳನ್ನು ತನ್ನೊಳಗು ಮಾಡಿಕೊಳ್ಳುವ ಒಂದು ಅನುಭಾವೀ ಪಂಥವಾಗಿದೆ. ಅದು ಸಾಂಪ್ರದಾಯಿಕ ಇಸ್ಲಾಂ ಅಲ್ಲ. ಅಖಿಲಾ ಭಾರತ ಯುವಜನ ಫೆಡರೇಶನ್‌ನ ಅಧ್ಯಕ್ಷರಾಗಿದ್ದ ಸಾತಿ ಸುಂದರೇಶ್ 'ಸೂಫಿ ಪಂಥವು ಮಧ್ಯ ಏಷ್ಯಾದಲ್ಲಿ ಇಸ್ಲಾಮಿ ಜಗತ್ತಿನಲ್ಲೇ ಹುಟ್ಟಿದ ದರ್ಶನ. ಇಸ್ಲಾಮಿನ ಕಂದಾಚಾರಗಳನ್ನು ವಿರೋಧಿಸಿ 'ತಸ್ ವುಫ್' (ಅನುಭಾವ) ಅನ್ನು ಸೂಫಿಗಳು ಒಪ್ಪಿಕೊಂಡವರು. ಸೂಫಿಗಳು ಕಾವ್ಯ ಸಂಗೀತ, ಚಿತ್ರಕಲೆ, ತತ್ವಶಾಸ್ತ್ರಗಳ ಸೃಜನಶೀಲ ಫಲಗಳನ್ನು ಮನುಕುಲಕ್ಕೆ ಕೊಟ್ಟವರು ಎನ್ನುತ್ತಾರೆ'.[೩]

ಬೌದ್ಧ ಧರ್ಮದಲ್ಲಿ ವಜ್ರಾಯಾನ ಎಂಬುದೊಂದು ತಾಂತ್ರಿಕ ರೂಪದ ಪಂಥವಿದೆ. ಈ ಪಂಥದವರನ್ನು ಬೌದ್ಧಸಿದ್ಧರು ಎಂದು ಕರೆಯಲಾಗುತ್ತದೆ. ಟಿಬೇಟಿನ ಗೋರಖನಾಥ ಎಂಬುವವನು ಈ ಬೌದ್ಧ ತಂತ್ರಪಂಥಕ್ಕೆ ಶಿವದೀಕ್ಷೆಯ ಆಯಾಮವಿತ್ತು

ನಾಥಪಂಥವನ್ನಾಗಿಸಿದನು. ಈ ನಾಥ ಪಂಥವು ಹಿಂದೂ ಅಂದರೆ ವೈದಿಕ ದೇವತೆಗಳನ್ನು ಒಪ್ಪಿಕೊಳ್ಳುವುದಿಲ್ಲ. ಅಲ್ಲದೆ ವರ್ಣಾಶ್ರಮ ಧರ್ಮ ಮತ್ತು ಜಾತೀಯತೆಯನ್ನು ತಿರಸ್ಕರಿಸುತ್ತದೆ.

ಮಧ್ಯ ಏಷ್ಯಾದಲ್ಲಿ ಸಾಂಪ್ರದಾಯಿಕ ಇಸ್ಲಾಮನ್ನು ಧಿಕ್ಕರಿಸಿ ಹೊಮ್ಮಿದ ಸೂಫಿ ಪಂಥ, ವೈದಿಕ ಆಚರಣೆಗಳನ್ನು ಮೀರಿ ಬೆಳೆದ ನಾಥಪಂಥಗಳು ಕಾಬೂಲ್ ಕಂದಾಹಾರಗಳ ಮೂಲಕ ಚಲಿಸುತ್ತಾ ಹರಡಿಕೊಳ್ಳಲಾರಂಭಿಸಿದ್ದವು. ಈ ಎರಡೂ ಪರಂಪರೆಗಳಿಗೆ ಕೊಡುಕೊಳುಗೆಯ ಸಂಬಂಧವಿತ್ತು.

ದತ್ತ ಪಂಥವು ನಾಥಪಂಥ ಮತ್ತು ಸೂಫಿ ಪಂಥಗಳ ಒಂದು ಸಂಕರ ರೂಪವಾಗಿದೆ. ದತ್ತಮಾರ್ಗದಲ್ಲಿ ಎರಡು ಶಾಖೆಗಳಿವೆ. ಒಂದು ಜನಾರ್ಧನ ಸ್ವಾಮಿಯಿಂದ ಆರಂಭವಾದ ಮರಾಠಿ ದತ್ತಮಾರ್ಗ. ಮತ್ತೊಂದು ಗಾಣಗಾಪುರದ ನರಸಿಂಹ ಸರಸ್ವತಿಯಿಂದ ಆರಂಭವಾದ ಕರ್ನಾಟಕ ದತ್ತಮಾರ್ಗ. ಈ ದತ್ತ ಪಂಥವೂ ವೈದಿಕ ಸಂಪ್ರದಾಯಗಳನ್ನು ಧಿಕ್ಕರಿಸಿ ಬೆಳೆದದ್ದೇ. ಬಾಬಾಬುಡನ್‌ಗಿರಿಯ ಬಗೆಗೆ ಕರ್ನಾಟಕ ಕೋಮುಸೌಹಾರ್ದ ವೇದಿಕೆ ತಯಾರಿಸಿದ ಅಧ್ಯಯನ ವರದಿ ಹೇಳುವಂತೆ 'ಹದಿನಾಲ್ಕನೇ ಶತಮಾನದಲ್ಲಿ, ಮುಖ್ಯವಾಗಿ ಮಹಾರಾಷ್ಟ್ರ, ಕರ್ನಾಟಕಗಳಲ್ಲಿ ದತ್ತ ಪಂಥವು ಕಾಣಿಸಿಕೊಂಡಿತು. ದತ್ತಾವತಾರಿಗಳು ಎಂದು ಜನ ನಂಬಿದ ಅನೇಕ ಸಂತರು ಕಾಣಿಸಿಕೊಂಡರು. ಇವರು ನಮ್ಮ ಸಮಾಜದ ನಾನಾ ಜಾತಿ, ಧರ್ಮಗಳಿಂದ ಬಂದವರು. ಮೂಲತಃ ಯೋಗಿಗಳಾದ ಇವರು ಸನ್ಯಾಸಿಗಳು. ಸಂಸಾರಿಗಳಿಗೆ ಇರುವ ಜಾತಿ ಮತಗಳ ಆಚರಣೆಗಳಿಗೆ ಹೊರತಾಗಿದ್ದ ಇವರನ್ನು ಅವಧೂತರು, ಆರೂಢರು ಎನ್ನಬಹುದು. ಯೋಗ, ಧ್ಯಾನ, ದೀಕ್ಷೆ ಮತ್ತು ತತ್ವಬೋಧನೆ ಇವರ ಚಟುವಟಿಕೆಗಳಾಗಿದ್ದವು.'[೪]

ಈ ಮೂರು ಪರಂಪರೆಗಳು ಮೂಲಭೂತವಾದಿ ಅರ್ಥಹೀನ ಆಚರಣೆಗಳಿಂದ ಮುಕ್ತವಾಗಿದ್ದವು. ಮುಖ್ಯವಾಗಿ ವರ್ಣಾಶ್ರಮ ಮತ್ತು ಜಾತಿ ಪದ್ಧತಿಯನ್ನು ಮೀರಿ ಬೆಳೆದು ಜಾತ್ಯತೀತವಾಗಿದ್ದವು. ಮೂರ್ತಿ ಪೂಜೆಯನ್ನು ನಿರಾಕರಿಸಿದ ಗುರು ಪರಂಪರೆಗಳಿವು. ಸೂಫಿಗಳಂತೂ ಗುರುವನ್ನು, ಜ್ಞಾನವನ್ನು ಹುಡುಕುತ್ತಾ ಅಲೆಮಾರಿಗಳಾಗಿದ್ದರು.

ಇಂಥ ಸೂಫಿ ಮತ್ತು ದತ್ತ ಮಾರ್ಗಗಳ ಮುಖ್ಯ ನೆಲೆ ಚಿಕ್ಕಮಗಳೂರು ಸಮೀಪದ ಪಶ್ಚಿಮ ಘಟ್ಟಗಳ ನಡುವಿರುವ ಹಸಿರುತಾಣ ಬಾಬಾಬುಡನ್‌ಗಿರಿ. 'ಫಾರಸಿ-ದಖನ್ ಎಂಬ ಸೂಫಿ ಸಂತ ಚರಿತ್ರೆಗಳು ಹೇಳುವಂತೆ ಬಾಬಾಬುಡನ್‌ಗಿರಿಯ ದಾದಾ ಹಯಾತ್ ಮೀರ್ ಖಲಂದರ್ ಎಂಬ ಸೂಫಿ ಸಂತ ೧೭ನೇ ಶತಮಾನದಲ್ಲಿ ಅರಬ್ ದೇಶದಿಂದ ಗಿರಿಗೆ ಬಂದನು. ಇವನ ಹೆಸರು ಅಬ್ದುಲ್ ಅಜೀಜ್ ಮಕ್ಕಿ ಯೂಸುಫ್. ಮಕ್ಕಿ ಎಂದರೆ ಮೆಕ್ಕಾಪಟ್ಟಣದ ನಿವಾಸಿ. ಅರಬ್ ದೇಶದ ಸ್ವಾಲೆಹಾ ಎಂಬುವವರ ಪ್ರಸಿದ್ಧ

ವಂಶಕ್ಕೆ ಸೇರಿದವನು. ಈ ವಂಶ ಸೂಫಿ ಪಂಥಕ್ಕೆ ಸೇರಿತ್ತು. ಸೂಫಿ ಪಂಥದಲ್ಲಿ ಜಿನಿಯಾ, ಖಲಂದರಿಯಾ, ಖಾದ್ರಿಯಾ, ರಫಾಯಿಯಾ ಮುಂತಾದ ಶಾಖೆಗಳಿವೆ. ದಾದಾ ಹಯಾತನು ಖಲಂದರಿಯಾ ಶಾಖೆಗೆ ಸೇರಿದವನು. ಆದಕಾರಣ ಖಲಂದರ್ ಎಂಬ ಬಿರುದು ಅಂಟಕೊಂಡಿದೆ. ಖಲಂದರ್ ಸೂಫಿಗಳ ಲಕ್ಷಣವೆಂದರೆ ಸಾಂಪ್ರದಾಯಿಕ ಇಸ್ಲಾಂ ಧರ್ಮ ವಿಧಿಸುವ ಆಚಾರ (ಶರೀಯತ್)ಗಳನ್ನೂ ಲೆಕ್ಕಿಸದೆ ಅನುಭಾವಿಕ ಸಾಧನೆಗಳಲ್ಲಿ ತೊಡಗಿರುವುದು, ಮತ್ತು ಆಲೋಚನೆ, ಕ್ರಿಯೆಗಳಲ್ಲಿ ನಿರಂಕುಶಮತಿಗಳಾಗಿರುವುದು.'[೫]

ದಾದಾ ಹಯಾತ್ ಮೀರ್ ಖಲಂದರ್ ಆ ಗಿರಿಯ ಉಸ್ತುವಾರಿಯನ್ನು ನೋಡಿಕೊಳ್ಳಲು ತನ್ನ ಶಿಷ್ಯನಾದ ಸಯ್ಯದ್ ಜಮಾಲುಲ್ಲಾ ಮಗ್ರಬಿಯನ್ನು ನೇಮಿಸಿದನು ಎಂದು ಹೇಳಲಾಗುತ್ತಿದೆ. ಇವನ ಮತ್ತೊಂದು ಹೆಸರೇ ಬಾಬಾಬುಡನ್. ಇವನ ಈ ಹೆಸರಿನ ಕಾರಣಕ್ಕಾಗಿಯೇ ಆ ಗಿರಿಯನ್ನು ಬಾಬಾಬುಡನ್‌ಗಿರಿ ಎಂದು ಕರೆಯಲಾಗಿದೆ. ಇವನೇ ಈ ಪ್ರಾಂತ್ಯಕ್ಕೆ ಕಾಫಿಯನ್ನು ಪರಿಚರಿಸಿದವನು ಎಂದು ನಂಬಲಾಗಿದೆ. ಆದ್ದರಿಂದ ಆ ಪ್ರಾಂತ್ಯದ ಕಾಫಿ ಬೆಳೆಗಾರರು ಮೊದಲ ಬೆಳೆಯ ಕಾಫಿಯ ಸ್ವಲ್ಪ ಭಾಗವನ್ನು ದರ್ಗಾಕ್ಕೆ ನೀಡುತ್ತಾರಂತೆ. ಮೂರ್ತಿ ಪೂಜೆಯನ್ನು ನಿರಾಕರಸಿದ ಈ ಸೂಫಿ ಸಂತರು ಗುರುವೇ ಶ್ರೇಷ್ಠ ಎಂದು ನಂಬಿ, ಗುರುವಿನ ಸಂಬಂಧಿ ಮತ್ತು ಆತ ಬಳಸಿದ ವಸ್ತುಗಳನ್ನು ಪೂಜಿಸುತ್ತಿದ್ದಾರೆ. ಗುರುಗಳ ಸಮಾಧಿ ಅವರಿಗೆ ಪೂಜ್ಯನೀಯವಾಗಿವೆ. ಅದರಂತೆ ಅಲ್ಲಿ ನೆಲೆಸಿದ್ದ ಪಾದುಕೆಗಳನ್ನು ಪೂಜಿಸುವ ಕ್ರಮವಿದೆ.

ಇದು ದತ್ತಪೀಠ, ಅದನ್ನು ಮುಸ್ಲಿಮರಿಂದ ವಿಮೋಚನೆ ಮಾಡಬೇಕು, ದತ್ತ ಜಯಂತಿ ಆಚರಿಸಬೇಕು. ಹೀಗೆ ದತ್ತಮಾಲಾ, ಶೋಭಾಯಾತ್ರೆ, ಅನಸೂಯ ಯಾತ್ರೆ.... ಮೊದಲಾದ ಹುಸಿ ಆಚರಣೆಗಳನ್ನು ಮಾಡಲು ಹಿಂದೂ ಕೋಮುವಾದಿಗಳು ತಯಾರಾಗಿದ್ದಾರೆ. ಇನಾಂ ದತ್ತ ಪೀಠ ಎಂಬುದು ಗ್ರಾಮದ ಹೆಸರು, ಇಲ್ಲಿ ಬಾಬಾಬುಡನ್ ದರ್ಗಾ ಇದೆ, ಈ ದರ್ಗಾಕ್ಕೆ ಈ ಗ್ರಾಮ ಇನಾಮ್ತಿಯಾಗಿ ಬಂದದ್ದು ಎಂದು ದಾಖಲೆಗಳು ಹೇಳುತ್ತವೆ. ಅಲ್ಲಿ ದತ್ತ ಜಯಂತಿ ನಡೆಯುತ್ತಿತ್ತು ಎಂದು ಹೇಳುವುದಕ್ಕೆ ಈ ಮತೀಯವಾದಿಗಳ ಬಳಿ ಯಾವ ದಾಖಲಾತಿಗಳೂ ಇಲ್ಲ. ಈ ಕುರಿತು ಕರ್ನಾಟಕ ಕೋಮುಸೌಹಾರ್ದ ವೇದಿಕೆ ನೇಮಿಸಿದ ಅಧ್ಯಯನ ಸಮಿತಿಯ ಸದಸ್ಯರಾದ ಪ್ರೊ. ವಿ.ಎಸ್. ಶ್ರೀಧರ್, ಶಿವಸುಂದರ್, ಡಾ. ರಹಮತ್ ತರೀಕೆರೆ, ಪ್ರೊ. ಶಿವರಾಮಯ್ಯ, ಡಾ. ಸುಧಾ, ಸರ್ಜಾಶಂಕರ ಹರಳೀಮಠ ಸಮಗ್ರವಾದ, ಪಾರದರ್ಶಕವಾದ ವರದಿಯೊಂದನ್ನು ತಯಾರಿಸಿದ್ದಾರೆ. ಇವರು ಬ್ರಿಟಿಷ್ ಸರ್ಕಾರ ಪ್ರತಿವರ್ಷ ತರುತ್ತಿದ್ದ ಆಡಳಿತ ವರದಿ (೧೮೬೪), ಇಂಪಿರೀಯಲ್ ಗೆಜೆಟಿಯರ್ (೧೮೮೭), ಮೈಸೂರು ಮಹಾರಾಜರ ಓಲೆ (೧೯೦೧), ಮೈಸೂರು ಗೆಜೆಟ್ (೧೯೩೮), ಮೈಸೂರು ಸರ್ಕಾರದ ಮುಜರಾಯಿ ಇಲಾಖೆ ದರ್ಗಾಕ್ಕೆ ಇನಾಮ್ತಿ ನೀಡುವಾಗ ಬರೆದ ಆದೇಶ (೧೯೦೬)–ಈ ಬಗೆಯ ಎಲ್ಲ ದಾಖಲೆಗಳನ್ನು ಪರಿಶೀಲಿಸಿ ಪ್ರಕಟಿಸಿದ್ದಾರೆ. ಈ ಎಲ್ಲ ದಾಖಲೆಗಳೂ ಅದು ದರ್ಗಾ, ಅಲ್ಲಿ ಆರಂಭದಿಂದಲೂ ಯಾವುದೇ ದತ್ತ ಜಯಂತಿ ನಡೆಯುತ್ತಿರಲಿಲ್ಲ ಎಂದು ತಿಳಿಸುತ್ತವೆ.

೧೯೧೭ ರಲ್ಲಿ ಪ್ರಕಟವಾದ ಧಾರ್ಮಿಕ ಸಂಸ್ಥೆಗಳ ಡೈರೆಕ್ಟರಿಯಲ್ಲಿ ಮೊಟ್ಟಮೊದಲ ಬಾರಿಗೆ ಇದು ದತ್ತಾತ್ರೇಯ ಪೀಠ, ಇಲ್ಲಿ ಮುಸ್ಲಿಮರು ಇತ್ತೀಚೆಗೆ ದರ್ಗಾ ಒಂದನ್ನು ನಿರ್ಮಿಸಿದ್ದಾರೆ, ಈ ಪೀಠ ೩೦೦ ವರ್ಷಗಳಷ್ಟು ಹಳೆಯದಾಗಿದೆ ಎಂಬ ಉಲ್ಲೇಖ ಪ್ರಸ್ತಾಪವಾಗುವುದನ್ನು ಗುರುತಿಸಿರುವ ಈ ಅಧ್ಯಯನ ಮಂಡಳಿ ಸದಸ್ಯರು ಇದು ಕೃತಕ ದಾಖಲೆ ಎಂದೇ ತೀರ್ಮಾನಿಸಿದ್ದಾರೆ. ಸಂಘಪರಿವಾರದ ಸುಳ್ಳು ಮತ್ತು ಭ್ರಮೆಗೆ ಇರುವುದು ಇದೊಂದೇ ದಾಖಲೆ. ಆದರೆ ಇದಕ್ಕಿಂತ ಸಂಪೂರ್ಣವಾಗಿ ಭಿನ್ನವಾದ ಸತ್ಯ ಹೇಳುವ ನೂರಾರು ದಾಖಲೆಗಳಿವೆ.

ವೈದಿಕತ್ವದ ಬ್ರಾಹ್ಮಣಶಾಹಿಯನ್ನು ತೊರೆದ ದತ್ತಪಂಥ, ಸಾಂಪ್ರದಾಯಿಕ ಇಸ್ಲಾಮನ್ನು ತಿರಸ್ಕರಿಸಿದ ಸೂಫಿಪಂಥಗಳ ಕೇಂದ್ರವಾದ ಬಾಬಾಬುಡನ್‌ಗಿರಿಯನ್ನು ವಸಾಹತುಶಾಹಿಯಿಂದ ತನ್ನ ನೋಟಕ್ರಮಗಳನ್ನು ಕಲುಷಿತಗೊಳಿಸಿಕೊಂಡ ಹಿಂದೂ ಮತೀಯವಾದಿಗಳು ದತ್ತಪೀಠವೆಂದೂ, ದತ್ತ ಹಿಂದೂಗಳ ಪ್ರತಿನಿಧಿಯೆಂದೂ ಸಾರುತ್ತಿದ್ದಾರೆ. ತಮ್ಮ ಮತೀಯ ಎಲ್ಲೆಗಳನ್ನು ದಾಟಿಕೊಂಡಿದ್ದ ದತ್ತ ಮತ್ತು ಸೂಫಿಗಳನ್ನು ಹಿಂದೂ, ಮುಸಲ್ಮಾನ ಎಂಬ ಗುಂಪುಗಳನ್ನಾಗಿ ಕಾಣುತ್ತಿದ್ದಾರೆ. ಎರಡೂ ಕೋಮಿನ ಜನರ ಸಾಮರಸ್ಯವನ್ನು ಕಾಪಾಡಬೇಕೆಂಬ ನ್ಯಾಯಾಲಯದ ಆದೇಶವನ್ನು ಬದಿಗೊತ್ತಿ ಸಂಘಪರಿವಾರಗಳು ದತ್ತಪೀಠವನ್ನು ವಿಮೋಚನೆ ಮಾಡಲು ಮುಂದಾಗಿವೆ. ಪೀಠಕ್ಕೆ ಹಿಂದೂ ಪೂಜಾರಿಯನ್ನು ನೇಮಿಸಿ ವಿಶೇಷ ಪೂಜಾ ವ್ಯವಸ್ಥೆಯನ್ನು ಮಾಡುವಂತೆ ಸರ್ಕಾರವನ್ನು ಒತ್ತಾಹಿಸುತ್ತಿವೆ. ಮತೀಯವಾದಿಗಳು ದತ್ತ ಜಯಂತಿ, ದತ್ತ ಮಾಲಾ ಶೋಭಾಯಾತ್ರೆಗಳ ಹೆಸರಿನಲ್ಲಿ ಮುಗ್ಧ ಜನರ ನಡುವೆ ಮತೀಯ ಕ್ಷೋಭೆಯನ್ನುಂಟುಮಾಡಿ ವೋಟ್‌ಬ್ಯಾಂಕ್ ರಾಜಕಾರಣ ಮಾಡುತ್ತಿದ್ದಾರೆ.

ಇಷ್ಟಾದರೂ ಈ ಪ್ರಯತ್ನ ಸಂಘಪರಿವಾರಗಳ ಪಾಲಿಗೆ ನುಂಗಲಾರದ ತುತ್ತು ಎನ್ನುವ ಕೋಮು ಸೌಹಾರ್ದ ವೇದಿಕೆ ಅದನ್ನು ಹೀಗೆ ಗ್ರಹಿಸಿದೆ:

> ಹಸಿವಿನ ಭರದಲ್ಲಿ ಇದು ತನ್ನ ಆಹಾರವೇ ಅಲ್ಲವೇ ಎಂಬುದನ್ನು ಯೋಚಿಸದೆ ಏನೇನನ್ನೊ ನುಂಗಿದ ಹಾವಿನಂತೆ ಸಂಘಪರಿವಾರ ಚಡಪಡಿಸುತ್ತಿದೆ. ಅದಕ್ಕೆ ಬಾಬಾಬುಡನ್‌ಗಿರಿಯನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಿಲ್ಲ. ಅದರ ಕೋಮುವಾದಿ ತರ್ಕದ ಹಿಡಿತಕ್ಕೆ ಗಿರಿ ಸಿಕ್ಕುತ್ತಿಲ್ಲ. ಸಾಮಾನ್ಯವಾಗಿ ಅದು ಮಂಡಿಸುವ ತರ್ಕವೆಂದರೆ, ಹಿಂದೆ ಆಳಿದ ಮುಸ್ಲಿಂ ದೊರೆಗಳು ನಮ್ಮ ದೇವರ ಜಾಗಗಳ ಮೇಲೆ ಆಕ್ರಮಣ ಮಾಡಿದರು, ಗುಡಿಗಳನ್ನು ಕೆಡವಿ ಮಸೀದಿ ಕಟ್ಟಿದರು, ಈಗ ನಾವು ಅವನ್ನು ಕೆಡವಿ ಮತ್ತೆ ಗುಡಿ ಕಟ್ಟುತ್ತೇವೆ ಎಂಬುದು. ಅಯೋಧ್ಯೆಯಲ್ಲಿ ಬಾಬರ ಮಸೀದಿ ಕೆಡವಿದ್ದು ಈ ತರ್ಕದ ಬಲದಿಂದ. ಆದರೆ ಗಿರಿಯಲ್ಲಿರುವ ದರ್ಗಾವನ್ನು ಹಾಗೆ ಕೆಡವಲು ಸಾಧ್ಯವಾಗುತ್ತಿಲ್ಲ.

ಕೆಡವೋಣ ಎಂದರೆ ಅಲ್ಲಿ ದತ್ತಾತ್ರೇಯನ ಹೆಸರೂ ಇದೆ. ದತ್ತಾತ್ರೇಯನನ್ನು ತಮ್ಮ ದೈವವಾಗಿ ಸ್ವೀಕರಿಸೋಣ ಎಂದರೆ, ಅವನು ಪಕ್ಕಾ ಅವೈದಿಕ ದೇವತೆ. ನಾಲ್ಕು ವೇದಗಳನ್ನು ನಾಯಿಗಳನ್ನಾಗಿ ಮಾಡಿ ಹಿಂದಿಟ್ಟುಕೊಂಡ ವೇದವಿರೋಧಿ. ಇದು ದತ್ತ ಪಂಥದ ಯತಿಯಿದ್ದ ಜಾಗವೆನ್ನೋಣವೆಂದರೆ ಅಲ್ಲಿದ್ದ ಯತಿ ಯಾರು ಎಂಬ ಬಗ್ಗೆ ಯಾವ ಮಾಹಿತಿಯೂ ಇಲ್ಲ. ಇದು ಕೇವಲ ದತ್ತಾತ್ರೇಯನ ಜಾಗ ಎಂದು ಹೇಳೋಣ ಎಂದರೆ, ಅಲ್ಲಿ ಸೂಫಿ ಪರಂಪರೆಯೂ ದಟ್ಟವಾಗಿ ನೆಲೆಸಿದೆ. ಸೂಫಿ ಪರಂಪರೆಯನ್ನು ಇಸ್ಲಾಮೀಕರಣ ಅಥವಾ ಮುಸ್ಲಿಮರ ಆಕ್ರಮಣ ಎನ್ನೋಣವೆಂದರೆ, ಸ್ವತಃ ಸೂಫಿ ಪಂಥವು ಇಸ್ಲಾಮಿ ಮೂಲಭೂತವಾದದ ವಿರುದ್ಧ ಸಂಘರ್ಷ ಮಾಡಿದ ಅನುಭಾವಿ ಪಂಥ. ಈಗಲೂ ಸನಾತನವಾದಿ ಮುಸ್ಲಿಮರು ದರ್ಗಾ ಸಂಸ್ಕೃತಿಯನ್ನು ನಿಷೇಧಿಸುತ್ತಾರೆ. ಅಹಲೆ ಹದೀಸ್, ತಬ್ಲಿಕ್ ಮುಂತಾದ ಸಂಘಟನೆಗಳು ಸೂಫಿಗಳ ಮೇಲೆ ದಾಳಿ ಮಾಡುತ್ತವೆ. ಇಲ್ಲಿ ಹಿಂದುಗಳಿಗೆ ಅನ್ಯಾಯವಾಗಿದೆ ಎನ್ನುವ ಎಂದರೆ, ತಲೆತಲಾಂತರದಿಂದ ಹಿಂದೂ ಧರ್ಮದ ಕೆಳಜಾತಿಗಳಿಗೆ ಸೇರಿದ ಬಹುಸಂಖ್ಯಾತ ಜನ ಗಿರಿಗೆ ನಡೆದುಕೊಳ್ಳುತ್ತಿದ್ದಾರೆ. ಅವರು ಇಲ್ಲಿನ ಪೂಜಾ ವಿಧಾನ ನಮಗೆ ಸಮ್ಮತವಿಲ್ಲವೆಂದು ಎಂದೂ ದೂರಲಿಲ್ಲ. ಹಿಂದೂ ಮುಸ್ಲಿಮರನ್ನು ಒಡೆದು ಎರಡು ಭಾಗ ಮಾಡಿ, ಮುಸ್ಲಿಮರನ್ನು ಒಂದು ಕಡೆ, ಹಿಂದೂಗಳನ್ನು ಇನ್ನೊಂದೆಡೆ ನಿಲ್ಲಿಸಿ ಯುದ್ಧ ಮಾಡಿಸಬೇಕು, ಹಿಂದೂಗಳ ಹಕ್ಕು ಕೊಡಿಸಿದ ಕೀರ್ತಿ ಪಡೆಯಬೇಕು, ದರ್ಗಾದ ಜಾಗದಲ್ಲಿ ದತ್ತನ ಗುಡಿ ಕಟ್ಟಿಸಿ, ಬ್ರಾಹ್ಮಣ ಪುರೋಹಿತರನ್ನು ನೇಮಿಸಿ ತನ್ನ ಯಜಮಾನಿಕೆ ಸ್ಥಾಪಿಸಬೇಕು ಎನ್ನೋಣ ಎಂದರೆ, ಬಾಬಾಬುಡನ್‌ಗಿರಿ ನಮ್ಮದು ಎಂದು ಯಾವ ಮುಸ್ಲಿಮರೂ ಹಠ ಮಾಡುತ್ತಿಲ್ಲ. ಹಿಂದೂಗಳು ಬರಬಾರದು ಎಂದು ಹೇಳುತ್ತಿಲ್ಲ. ಬದಲಿಗೆ ಬಾಬಾಬುಡನ್‌ಗಿರಿ ರಕ್ಷಿಸುವ ಚಳವಳಿಯಲ್ಲಿ ಕನ್ನಡನಾಡಿನ ಎಲ್ಲ ಪ್ರಗತಿಪರರು, ಶೂದ್ರಸ್ವಾಮಿಗಳು, ಎಡಪಂಥೀಯರು, ಕನ್ನಡದ ಸಂವೇದನಾಶೀಲ ಲೇಖಕರು, ಚಿಂತಕರು, ರೈತ ಸಂಘದವರು, ದಲಿತ ಸಂಘರ್ಷ ಸಮಿತಿಯವರು ಒಗ್ಗೂಡಿಬಿಟ್ಟಿದ್ದಾರೆ.[೬]

### ೩.೨ ಪುರಾಣ, ಚರಿತ್ರೆ ಮತ್ತು ನಂಬಿಕೆಯ ನಡುವೆ ರಾಮಸೇತು

ರಾಷ್ಟ್ರಮಟ್ಟದಲ್ಲಿ ಮಂಕಾಗಿರುವ ತನ್ನ ಪ್ರಾಬಲ್ಯವನ್ನು ಮತ್ತೆ ಬಲಗೊಳಿಸಿಕೊಳ್ಳಲು, ಸಂಘಪರಿವಾರದ ರಾಜಕೀಯ ಮುಖವಾಣಿಯಾದ ಬಿ.ಜೆ.ಪಿ.ಗೆ ಈಗ ರಾಮಸೇತು ವಿವಾದ ವರವಾಗಿ ಪರಿಣಮಿಸಿದೆ. ಅದು ಮತ್ತೆ ರಾಮನ ಬಗೆಗಿನ ಮುಗ್ಧರ ಸಹಜ ನಂಬಿಕೆಯನ್ನು ಮತಗಳನ್ನಾಗಿ ಪರಿವರ್ತಿಸಲು ಯತ್ನಿಸುತ್ತಿದೆ.

ಶ್ರೀಲಂಕಾ ಮತ್ತು ಭಾರತದ ದಕ್ಷಿಣ ತುದಿಯ ನಡುವೆ ಮನ್ನಾರ್‌ಕೊಲ್ಲಿ ಇದೆ. ಇವುಗಳ ನಡುವಿನ ಸಮುದ್ರ ಭಾಗದಲ್ಲಿ ಹವಳದ ಕಲ್ಲುಗಳಿಂದ ಕೂಡಿರುವ ಒಂದು ರಚನೆ ಇದೆ. ಇದನ್ನು ಹಿಂದೂಗಳು ಶ್ರೀರಾಮ ಲಂಕೆಯಿಂದ ಸೀತೆಯನ್ನು ಕರೆತರಲು ತನ್ನ ಕಪಿಸೈನ್ಯದ ನೆರವಿನಿಂದ ನಿರ್ಮಿಸಿದ ಸೇತುವೆ ಎಂದು ನಂಬಿದ್ದಾರೆ. ಬ್ರಿಟಿಷರ ಆಡಳಿತವು ಇದನ್ನು ಆ್ಯಡಂ ಬ್ರಿಡ್ಜ್ ಎಂದು ಕರೆಯಲಾರಂಭಿಸಿತ್ತು. ಇಂದು ಭಾರತದ ಪಶ್ಚಿಮ ಕರಾವಳಿಯಿಂದ, ಪೂರ್ವ ಕರಾವಳಿಯ ತೀರಗಳಿಗೆ ಬರುವ ಭಾರಿ ಹಡಗುಗಳಿಗೆ ಮನ್ನಾರ್ ಕೊಲ್ಲಿಯಲ್ಲಿ ಸಮುದ್ರದ ಮೇಲ್ಮೈಯಿಂದ ಐದಾರು ಅಡಿಗಳಷ್ಟು ಕೆಳಗಿರುವ 'ರಾಮಸೇತು' ತಡೆಯುಂಟು ಮಾಡುತ್ತಿದೆ. ಆದ್ದರಿಂದ ಆ ಹಡಗುಗಳು ಶ್ರೀಲಂಕಾವನ್ನು ಬಳಸಿ ಪೂರ್ವ ಕರಾವಳಿಯನ್ನು ತಲುಪಬೇಕಾಗಿದೆ. ಇವುಗಳ ಪ್ರಯಾಣದ ವೆಚ್ಚ, ಸಮಯ ಹಾಳಾಗುತ್ತಿರುವುದರಿಂದ ಕೇಂದ್ರ ಸರ್ಕಾರ ಈ ಮನ್ನಾರ್ ಕೊಲ್ಲಿಯಲ್ಲೇ ಕೃತಕ ಕಾಲುವೆಯೊಂದನ್ನು ತೋಡಿ, ಸಮುದ್ರದ ಆಳವನ್ನು ವಿಸ್ತರಿಸುವ ಸೇತು ಸಮುದ್ರಂ ಕಾಲುವೆ ಯೋಜನೆಯನ್ನು ಕಾರ್ಯರೂಪಕ್ಕೆ ತರುತ್ತಿದೆ. ಈ ಯೋಜನೆಯಿಂದ 'ರಾಮಸೇತು'ವನ್ನು ಒಡೆಯಬೇಕಾಗಿದೆ. ಸಂಘಪರಿವಾರಗಳು ಕೇಂದ್ರದ ಯು.ಪಿ.ಎ. ಸರ್ಕಾರದ ಈ ಯೋಜನೆಯನ್ನು ವಿರೋಧಿಸಿ, ಮತಗಿಟ್ಟಿಸಿಕೊಳ್ಳಲು ಯತ್ನಿಸುತ್ತಿವೆ. ಸ್ವಾರಸ್ಯದ ಸಂಗತಿ ಎಂದರೆ ಈ ಯೋಜನೆ ಜಾರಿಗೆ ಬಂದದ್ದೇ ಕೇಂದ್ರದಲ್ಲಿ ಬಿ.ಜೆ.ಪಿ. ನೇತೃತ್ವದ ಎನ್.ಡಿ.ಎ. ಸರ್ಕಾರವಿದ್ದಾಗ. ಸಂಘಪರಿವಾರಗಳಿಗೆ ಅಂದು ಅಭಿವೃದ್ಧಿ ಯೋಜನೆಯಾಗಿ ಕಂಡದ್ದು ಇಂದು ಜನರ 'ನಂಬಿಕೆ'ಯ ಪ್ರಶ್ನೆಯಾಗಿದೆ. ಮತ್ತೆ 'ರಾಮಸೇತು' ಈ ಮತೀಯವಾದಿಗಳ ಲಾಂಛನವಾಗುತ್ತಿದೆ.

ಪುರಾಣ, ಸಾಹಿತ್ಯ, ಐತಿಹ್ಯಗಳೆಲ್ಲವನ್ನೂ ಚರಿತ್ರೆಯನ್ನಾಗಿಯೇ ನೋಡುವುದು ಕೋಮುವಾದಿಗಳು ಬೆಳಸಿಕೊಂಡು ಬಂದ ರೂಢಿ. ಪುರಾಣದ ಎಲ್ಲ ಸ್ಥಳ, ಪುರುಷರನ್ನು ವರ್ತಮಾನದಲ್ಲಿ ಹುಡುಕತೊಡಗುವ ಮೂಲಭೂತವಾದಿಗಳು ಅವೆಲ್ಲವನ್ನು ತಮ್ಮ ಸಮುದಾಯದ ಲಾಂಛನವನ್ನಾಗಿಸಲು ಪ್ರಯತ್ನಿಸುತ್ತಾರೆ. ರಾಜಕೀಯ ದಾಹಕ್ಕಾಗಿ ಚರಿತ್ರೆ, ವರ್ತಮಾನ, ಪುರಾಣಗಳ ಜೊತೆಯಲ್ಲಿ ಅರ್ಥಹೀನ ಆಟವಾಡಲೆತ್ನಿಸುತ್ತಾರೆ. ಈಗ ರಾಮಸೇತುವಿನದೂ ಅದೇ ಕಥೆಯೇ. ರಾಮಸೇತುವನ್ನು ಒಡೆದರೆ ಸುನಾಮಿಯ ಭೀತಿ ಇದೆ, ಜೀವ ಪರಿಸರ ನಾಶವಾಗುತ್ತದೆ, ಅಸಂಖ್ಯಾ ಜಲಚರಗಳು ನಾಶವಾಗುತ್ತವೆ ಎಂಬ ಕಾರಣಗಳನ್ನು ಸಂಘಪರಿವಾರ ತಾನು ಬಿಂಬಿಸಲೆತ್ನಿಸುತ್ತಿರುವ 'ನಂಬಿಕೆ'ಯ ಕಾರಣಕ್ಕೆ ಬಾಲಗಳನ್ನಾಗಿ ಜೋಡಿಸುತ್ತಾ ಈ ಯೋಜನೆಯನ್ನು ವಿರೋಧಿಸುತ್ತಿದೆ.

ರಾಮಸೇತು ಯೋಜನೆಯಿಂದ ಅಲ್ಲಿನ ಸ್ಥಳೀಯ ಬದುಕು ಪಲ್ಲಟವಾಗುವಂತಿದೆ. ಸಮುದ್ರದ ಆ ಭಾಗವನ್ನೇ ನಂಬಿ ಬದುಕುತ್ತಿರುವ ಎಲ್ಲ ಧರ್ಮ ಮತ್ತು ಜಾತಿಗಳ ಬಡ ಮೀನುಗಾರರು ಈ ಯೋಜನೆಯ ವಿರುದ್ಧ ಮಾಡುತ್ತಿರುವ ಪ್ರತಿಭಟನೆಗಳಲ್ಲಿ ಆ ಪಲ್ಲಟದ ಭೀತಿ ಕಾಣಲಾರಂಭಿಸಿದೆ. ಶ್ರೀಲಂಕಾದ ಶ್ರೀ ಜಯವರ್ಧನೆಪುರ ವಿಶ್ವವಿದ್ಯಾಲಯದ ಪ್ರೊ. ಕೆ.ಎಸ್.ಜೆ. ಕಟುವೋಥಾ ಕಾಲುವೆ ಯೋಜನೆ ಸಮೃದ್ಧ ಹಿಂದೂ ಮಹಾಸಾಗರ ತಳದ ಜೀವರಾಶಿಗಳನ್ನು ಬುಡಮೇಲು ಮಾಡಬಹುದು ಎಂಬ ಆತಂಕವನ್ನು

ವ್ಯಕ್ತಪಡಿಸಿದ್ದಾರೆ. ಜಾಕೋಬ್ ಜಾನ್ ಅಂಥ ಅರ್ಥಶಾಸ್ತ್ರಜ್ಞರು ಈ ಯೋಜನೆ ಆರ್ಥಿಕವಾಗಿ ಲಾಭದಾಯಕವಲ್ಲ ಎಂದು ಹೇಳುತ್ತಿದ್ದಾರೆ. ಎಲ್ಲಕ್ಕಿಂತ ಮುಖ್ಯವಾಗಿ ಭಾರಿ ಅಲೆಗಳಿಗೆ ತಡೆಗೋಡೆಯಂತಿರುವ ಈ ಸೇತುವನ್ನು ಒಡೆದರೆ ಸುನಾಮಿಯ ಭಯದಲ್ಲಿ ನರಳಬೇಕಾಗುತ್ತದೆ ಎಂಬ ದನಿಯೂ ಕೇಳಿಬರುತ್ತಿದೆ.

ಇಂಥ ನಿಜ ಕಾರಣಗಳನ್ನು ಅಥವಾ ನಿಜವಿರಬಹುದಾದ ಕಾರಣಗಳನ್ನು ಮುಂದಿಟ್ಟುಕೊಂಡು ಸಂಘಪರಿವಾರಗಳು ಈ ಯೋಜನೆಯನ್ನು ವಿರೋಧಿಸಬಹುದಿತ್ತು. ಅಭಿವೃದ್ಧಿಯ ಹೆಸರಿನಲ್ಲಿ ನಡೆಯುವ ಎಲ್ಲ ಯೋಜನೆಗಳು ಅಸಹಾಯಕರಿಗೆ, ಬಡವರಿಗೆ, ರೈತರಿಗೆ, ಸಣ್ಣ ವ್ಯಾಪಾರಿಗಳಿಗೆ, ಚಿಕ್ಕ ಚಿಕ್ಕ ವಿವಿಧ ಕಸುಬುದಾರರ ಪಾಲಿಗೆ ಯಾವತ್ತೂ ಮುಳುವಾಗುವಂಥವೇ. ಇನ್ನೊಬ್ಬರ ಬದುಕನ್ನು ಕಸಿದುಕೊಳ್ಳುವ ಇಂಥ ವಿಕಾಸದ ಹೆಸರಿನಲ್ಲಿ ನಡೆಯುವ ಅವನತಿಯನ್ನು ಇಡೀ ತನ್ನ ಚರಿತ್ರೆಯಲ್ಲಿ ಪ್ರಶ್ನಿಸದ ಸಂಘಪರಿವಾರಗಳು ರಾಮಸೇತುವನ್ನು ಮಾತ್ರ ಪ್ರಶ್ನಿಸುತ್ತಿವೆ ಎಂದರೆ ಅದು ಅಸಂಗತವಾಗಿ ಕಾಣದೆ ಇರಲು ಸಾಧ್ಯವೇ?

ಭಾರತದ ದಕ್ಷಿಣ ತೀರ ಪ್ರದೇಶದಲ್ಲಿ ಅಣುಶಕ್ತಿ ತಯಾರಿಸಲು ಬೇಕಾಗುವ ಥೋರಿಯಂ ನಿಕ್ಷೇಪವಿದೆ, ಮುಂದಿನ ನಾಲ್ಕು ಶತಮಾನಗಳ ಕಾಲ ಭಾರತಕ್ಕೆ ಅಣುಶಕ್ತಿಯನ್ನು ಕೊಡುವ ಸಾಮರ್ಥ್ಯ ಇಲ್ಲಿನ ಥೋರಿಯಂಗೆ ಇದೆ, ಸೇತು ಸಮುದ್ರಂ ಯೋಜನೆಯಿಂದ ಈ ನಿಕ್ಷೇಪ ಕೊಚ್ಚಿಹೋಗುವ ಸಾಧ್ಯತೆ ಇದೆ ಎಂಬಂಥ ವರದಿಗಳೂ ಇವೆ. ಅಮೆರಿಕಾದಂಥ ರಾಷ್ಟ್ರಗಳೂ ಬಯಸುತ್ತಿರುವುದೂ ಇದನ್ನೇ. ಅಲ್ಲದೆ ಈ ಯೋಜನೆಯಲ್ಲಿ ಅಂಥ ರಾಷ್ಟ್ರಗಳ ಕುಯುಕ್ತಿಯೂ ಇದೆ ಎನ್ನುವ ಮಾತುಗಳು ಕೇಳಲಾರಂಭಿಸಿವೆ. ಇದು ನಿಜವಿರಲೂಬಹುದು. ಈ ಮಾತನ್ನು ಸಂಘಿಗಳೇ ಹೇಳುತ್ತಿರುವುದರಿಂದ, ಇದೂ ಕೂಡ ಪೊಳ್ಳೆ ನೆವವಾಗಿರಲೂಬಹುದು. ಇದರ ಬಗೆಗೆ ಸಂಘಗಳ ಒತ್ತಡಕ್ಕೆ ಮಣಿಯದ ನಿಜ ಸಂಶೋಧನೆಗಳು ಬರಬೇಕಿದೆ.

ಈ ಯೋಜನೆಯ ವಿವಾದವನ್ನು ಆರ್ಥಿಕ, ರಾಜಕೀಯ, ಸ್ಥಳೀಯ ಬದುಕು, ಜೀವ ಪರಿಸರ, ಅಂತರಾಷ್ಟ್ರೀಯ ಕುತಂತ್ರ–ಈ ಎಲ್ಲ ನೆಲೆಗಳಿಗಿಂತ ಭಿನ್ನವಾಗಿ ನೋಡುವ ಮತ್ತೊಂದು ಆಯಾಮವೂ ಇದೆ. ಅದು ರಾಮ, ಸೇತುವೆಯ ನೆಲೆ, ಅವುಗಳ ಬಗೆಗೆ ಜನರಿಗಿರುವ ನಂಬಿಕೆಯನ್ನು ಕುರಿತದ್ದು. ಚರಿತ್ರೆ, ಪುರಾಣ, ಸಾಹಿತ್ಯ, ವರ್ತಮಾನ ನಂಬಿಕೆಗಳ ನಡುವಿನ ಅಂತರ ತಿಳಿಯದ ಮತೀಯವಾದಿಗಳ ನೋಟಕ್ರಮವನ್ನು ತಿದ್ದುವಂಥದ್ದು. ತಾವು ಆತುಕೊಂಡ ನಂಬಿಕೆ, ಕಲ್ಪನೆಗಳೆಲ್ಲವನ್ನೂ ಸಾಂಸ್ಕೃತಿಕ ಪಾರಂಪರಿಕ ಪ್ರತಿಮೆಗಳು ಎಂದು ಬಿಂಬಿಸುತ್ತಾ, ಅವುಗಳನ್ನು ಮತೀಯವಾದಿ ಲಾಂಛನಗಳನ್ನಾಗಿ ಮಾಡಿಬಿಡುವ ಕೋಮುವಾದಿಗಳ ಕುತಂತ್ರವನ್ನು ವಿವರಿಸುವಂಥದ್ದು.

ರಾಮನು ಇದ್ದನೆ, ಸೇತುವೆಯನ್ನು ಕಟ್ಟಿದ್ದನೇ ಎನ್ನುವುದು ಮುಖ್ಯ ಪ್ರಶ್ನೆಯೇ ಅಲ್ಲ. ಹಾಗೆ ತಾರ್ಕಿಕವಾಗಿ ಪ್ರಶ್ನೆ ಕೇಳುವುದು ಕೂಡ ಸರಿಯಾದುದಲ್ಲ. ಜನರ ನಂಬಿಕೆಗಳಿಗೂ ಮೌಲ್ಯಗಳಿವೆ. ಅದಕ್ಕಾಗಿ ಕರುಣಾನಿಧಿಯಂಥವರು ಕೇಳುವ ತಾರ್ಕಿಕ ಪ್ರಶ್ನೆಗಳೂ ಅಸಂಗತವಾಗುತ್ತವೆ. ರಾಮ ಮತ್ತು ಸೇತುವೆಯ ಅಧಿಕೃತತೆಯನ್ನು ಇಲ್ಲವಾಗಿಸಲು

ಮುಂದಾದರೆ ಎಂಥ ಪ್ರಶ್ನೆಗಳನ್ನು ಬೇಕಾದರೂ ಕೇಳಬಹುದು. ಜೈನ ಕವಿ ನಾಗಚಂದ್ರ ಬರೆದ 'ರಾಮಚಂದ್ರ ಚರಿತ ಪುರಾಣ'ದಲ್ಲಿ ರಾವಣ ಸೀತೆಯನ್ನು ಪುಷ್ಪಕ ವಿಮಾನದಲ್ಲಿ ಹಾರಿಸಿಕೊಂಡು ಹೋಗುತ್ತಾನೆ. ದಶರಥನ ಮಗ ರಾಮನ ಬಳಿಯೂ ಲಂಕೆಗೆ ಹೋಗಲು ಒಂದು ಪುಷ್ಪಕ ವಿಮಾನವಿರಲಿಲ್ಲವೆ? ಅವನೇಕೆ ಸೇತುವೆ ಕಟ್ಟುತ್ತಾ ಕಾಲಹರಣ ಮಾಡಿದ ಎಂಬಂಥ ಪ್ರಶ್ನೆಗಳು ದುತ್ತನೆ ಎದುರಾಗುತ್ತವೆ. ಇಂಥ ಪ್ರಶ್ನೆಗಳೂ ಕೂಡ ಅಸಂಗತ ಅನ್ನಿಸುತ್ತವೆ. ಪುರಾಣ ಮತ್ತು ಸಾಹಿತ್ಯಗಳನ್ನು ರೂಪಕ ಸತ್ಯಗಳನ್ನಾಗಿ ಕಾಣುವ ಕನಿಷ್ಠ ಸೂಕ್ಷ್ಮತೆ ಇದ್ದವರು ಈ ಬಗೆಯ ಪ್ರಶ್ನೆಗಳನ್ನು ಕೇಳಲಾರರು. ಈ ಎಲ್ಲ ಸೂಕ್ಷ್ಮತೆಗಳನ್ನು ಮೀರಿ 'ರಾಮಸೇತು ಎಂಬುದು ಜನರ ನಂಬಿಕೆಯನ್ನು ರಾಜಕೀಯ ಉದ್ದೇಶಗಳಿಗೆ ಬಳಸಿಕೊಳ್ಳುವ ಮತ್ತು ಹಾಗೆ ಬಳಸಿಕೊಳ್ಳುವುದಕ್ಕೆ ಪ್ರತಿಕ್ರಿಯಿಸುತ್ತಿರುವವರ ನಡುವಿನ ವಿಷಯವಾಗಿದೆ' ಎನ್ನುತ್ತಾರೆ ಚರಿತ್ರಕಾರ್ತಿ ರೋಮಿಲಾ ಥಾಪರ್.[೭]

ರಾಮನ ಅಸ್ತಿತ್ವ, ಅಥವಾ ರಾಮಾಯಣದ ನಿರಾಕರಣೆ, ರಾಮ ಸೇತುವಿನ ಅಧಿಕೃತತೆಗಳಿಗಿಂತ ಜನರ ನಂಬಿಕೆಯೇ ಸೂಕ್ಷ್ಮವಾದದ್ದು. ಈ ಸೂಕ್ಷ್ಮವಾದ ನಂಬಿಕೆಯನ್ನು ಅಲುಗಾಡಿಸಿದರೆ ಇಡೀ ದೇಶದ ಆತ್ಮವೇ ನಲುಗಿಹೋಗುತ್ತದೆ ಎಂಬುದು ಕೋಮುವಾದ ಎಂಬ ಫ್ಯಾಸಿಸ್ಟ್ ಐಡಿಯಾಲಜಿಗೂ ಗೊತ್ತು. ಅದಕ್ಕೆ ಅದು ಅದನ್ನೇ ಉಸಿರನ್ನಾಗಿಸಿಕೊಂಡಿದೆ.

ಕೆ.ವಿ. ಸುಬ್ಬಣ್ಣ, ಡಿ.ಆರ್. ನಾಗರಾಜ್, ಪಿ. ಲಂಕೇಶ್, ರಹಮತ್ ತರೀಕೆರೆಯವರಂಥ ಚಿಂತಕರು ಈಗಾಗಲೇ ರಾಮಾಯಣ ಹಾಗೂ ರಾಮನ ಹತ್ತಾರು ಪಠ್ಯಗಳಿವೆ ಎಂದು ಈ ಹಿಂದೆ ತೋರಿಸಿಕೊಟ್ಟಿದ್ದಾರೆ. ಜನಸಂಸ್ಕೃತಿಗಳು ಅಸಂಖ್ಯ ರಾಮ, ಕೃಷ್ಣರನ್ನು ನಂಬಿವೆ. ಅಯೋಧ್ಯಾ ರಾಮನಿಗಿಂತ ಸ್ಥಳೀಯ ರಾಮನೇ ಶ್ರೇಷ್ಠ ಎಂದು ಈ ಜನಸಂಸ್ಕೃತಿಗಳು ನಂಬಿವೆ ಎಂಬುದನ್ನೂ ಈಗಾಗಲೇ ಕಂಡಿದ್ದೇವೆ. ಜನರ ಈ ನಂಬಿಕೆಗಳು ಒಳಗೊಳಗೇ ಘರ್ಷಿಸಿಕೊಳ್ಳುತ್ತಾ, ವಾಗ್ವಾದಗಳನ್ನು ನಡೆಸುತ್ತಾ, ಸಡಿಲವಾಗುತ್ತಾ ಮತ್ತೆ ಗಟ್ಟಿಯಾಗುತ್ತಾ ಸಾಗಿಬಂದಿವೆ. ರೋಮಿಲಾ ಥಾಪರ್ ಹೇಳುವಂತೆ 'ನಮ್ಮ ಪರಂಪರೆ ಸಮೃದ್ಧವಾಗಿರುವುದು ನಂಬಿಕೆಗಳಿಂದಷ್ಟೇ ಅಲ್ಲ, ನಂಬಿಕೆಗಳನ್ನು ಪ್ರಶ್ನಿಸಿದವರಿಂದ ಕೂಡ. ಇದನ್ನು ಮರೆಯಬಾರದು'.[೮] ಈ ನಂಬಿಕೆಯ ಸೂಕ್ಷ್ಮತೆಯನ್ನು ಅರಿಯದಿದ್ದರೆ ರಾಮಾಯಣ, ರಾಮ, ಲಂಕೆ, ಸೇತುವೆ ಎಲ್ಲವನ್ನೂ ನಿರಾಕರಿಸಿಬಿಡಬಹುದು. ಈ ಬಗೆಗೆ ರೋಮಿಲಾ ಥಾಪರ್ ಹೇಳುವ ಈ ಮಾತುಗಳು ಮುಖ್ಯ:

> ಚರಿತ್ರಕಾರರಿಗೆ ಒಬ್ಬ ವ್ಯಕ್ತಿ, ಒಂದು ಸ್ಥಳ ಅಥವಾ ಒಂದು ಘಟನೆಯ ಐತಿಹಾಸಿಕತೆಯ ವಿಶ್ಲೇಷಣೆಗೆ ಬೇಕಾಗಿರುವುದು ಕಾಲ ದೇಶಗಳಿಗೆ ಸಂಬಂಧಿಸಿದ ಖಚಿತವಾದ ಮಾಹಿತಿ: ಗಟ್ಟಿ ಪುರಾವೆ. ವಾಲ್ಮೀಕಿ ರಾಮಾಯಣದ ಅಯೋಧ್ಯೆ ಮತ್ತು ಲಂಕೆಯ ನೆಲೆಗಳ ಕುರಿತು ವಿದ್ವಾಂಸರಲ್ಲಿ ಯಾವಾಗಿನಿಂದಲೂ ಒಮ್ಮತವಿಲ್ಲ. ವಿಂಧ್ಯ ಶ್ರೇಣಿಗಳ ಅಮರಕಂಟಕ, ಚೋಟಾ ನಾಗ್ಪುರ, ಮಹಾನದಿಯ ಮುಖಜ ಭೂಮಿ....ಹೀಗೆ ಯಾವುದಾದರೊಂದು ಪ್ರದೇಶ ಲಂಕೆಯಾಗಿರಬಹುದಾದ ಸಾಧ್ಯತೆಗಳಿವೆ. ಮೌರ್ಯರ ಕಾಲದ ಮತ್ತು

ಮೌರ್ಯ ನಂತರದ ಉಲ್ಲೇಖಗಳು ಕೂಡ ಲಂಕೆಯನ್ನು ತಾಮ್ರಪರ್ಣ ಎಂದು ಬಣ್ಣಿಸುತ್ತವೆ. ಗ್ರೀಕ್‌ನಲ್ಲಿದ್ದ 'ತಾಪ್ರೋಬೇನ್' ಎಂದಾಗುತ್ತದೆ. ಅಶೋಕನ ಶಿಲಾಶಾಸನವೊಂದು ತಾಮ್ರಪರ್ಣಿಯನ್ನು ಸಾಮ್ರಾಜ್ಯದ ಗಡಿಯಾಗಿ ನಿಗದಿಪಡಿಸುತ್ತದೆ.

ಆಮೇಲೆಯೂ ಲಂಕೆ 'ಸಿಂಹಳ ದ್ವೀಪ' ಎಂದು ಸಾಮಾನ್ಯವಾಗಿ ಕರೆಯಲ್ಪಟ್ಟಿದೆಯೇ ಹೊರತು, ಈಗಿನಂತೆ ಶ್ರೀಲಂಕಾ ಎಂದಲ್ಲ. ಪ್ರಚಲಿತ ಹೆಸರನ್ನು ನಾವು ಕಾಣುವುದು ಕ್ರಿಸ್ತಶಕದ ವರ್ಷಗಳಲ್ಲಿ. ಚರಿತ್ರಕಾರರಿಗೆ ಇದೊಂದು ಒಗಟು. ವಾಲ್ಮೀಕಿ ಇಂದಿನ ಸಿಲೋನನ್ನು ಉಲ್ಲೇಖಿಸುತ್ತಿದ್ದರೆ ಆತ ತಾಮ್ರಪರ್ಣ ಅಥವಾ ಸಿಂಹಳ ಎಂಬ ಆಗ ಚಾಲ್ತಿಯಲ್ಲಿದ್ದ ಹೆಸರುಗಳನ್ನು ಬಳಸಬೇಕಿತ್ತು. ಹಾಗಾಗಿಲ್ಲವಾದ್ದರಿಂದ, ವಾಲ್ಮೀಕಿ ಉಲ್ಲೇಖಿಸುತ್ತಿರುವ ಶ್ರೀಲಂಕಾ ಎಂಬುದು ಬೇರೆ ಇನ್ನಾವುದೋ ನೆಲೆಯಾಗಿರಬೇಕು ಎಂದು ಸರಳವಾಗಿ ಊಹಿಸಬಹುದು. 'ಸೇತು' ಕೂಡ ರಾಮಾಯಣ ಕತೆಯ ಎಲ್ಲಾ ಆವೃತ್ತಿಗಳಲ್ಲೂ ಕಂಡುಬರುವಂಥ ಸಾಮಾನ್ಯ ಸಂಗತಿಯೇನಲ್ಲ.

ಇಂಡಿಯಾದಲ್ಲಿ ರಾಮಾಯಣದ ಭಿನ್ನ ಆವೃತ್ತಿಗಳಿವೆ. ವಾಲ್ಮೀಕಿ ರಾಮಾಯಣದ ಕಾಲಕ್ಕೆ ಸನಿಹವೆನಿಸುವ ಹಂತದಲ್ಲಿ ಸೃಷ್ಟಿಯಾಗಿರುವಂಥವು–ಬೌದ್ಧ ಮತ್ತು ಜೈನ ರಾಮಾಯಣಗಳು. ಮೂಲ ರಾಮಾಯಣಕ್ಕೂ ಇವೆರಡಕ್ಕೂ ಯಥಾವತ್ ಸಂಬಂಧವಿಲ್ಲ. 'ದಶರಥ ಜಾತಕ'ದ ರಾಮನು ವಾರಣಾಸಿಯ ದೊರೆಯ ಮಗ. ಅವನು ರಾಜ್ಯ ತ್ಯಜಿಸಿ ಹೋಗುವುದು ಹಿಮಾಲಯಕ್ಕೆ. ಇದರಲ್ಲಿ ಸೀತೆಯ ಅಪಹರಣದ ಪ್ರಸಂಗವೇ ಇಲ್ಲ. ಜೈನ ಆವೃತ್ತಿಗಳಲ್ಲಿ ತೀರಾ ಹಳೆಯದೆಂದರೆ ವಿಮಲ ಸೂರಿಯ ಪದಮ ಚರಿತ ಎಂಬುದು. ವಿಮಲಸೂರಿ ತನ್ನದೇ ನಿಜವಾದ ರಾಮಾಯಣ ಕಥನ ಎಂದು ಹೇಳಕೊಳ್ಳುತ್ತಾನೆ. ಉಳಿದವುಗಳಲ್ಲೆಲ್ಲ ವಿಸಂಗತಿಗಳಿವೆ ಎನ್ನುತ್ತಾನೆ. ಇಲ್ಲಿ ರಾವಣ ರಾಕ್ಷಸನಲ್ಲ; ಮನುಷ್ಯ, ಖಳನಲ್ಲ, ಪ್ರತಿನಾಯಕ ಜೈನ ಮತದ ಚೌಕಟ್ಟಿನಲ್ಲಿ ಇದರಲ್ಲಿನ ಪ್ರಸಂಗಗಳು ನಿರೂಪಿತವಾಗಿವೆ.[೯]

## ಕೊನೆ ಟಿಪ್ಪಣಿಗಳು

೧. ಡಿ. ಆರ್. ನಾಗರಾಜ್, 'ಚಲಿಸುವ ಧರ್ಮ ಮರೆತು ನಿಂತ ಕಟ್ಟಡಕ್ಕಾಗಿ ಸಾಯುವವರು', ಸಂ: ಅಗ್ರಹಾರ ಕೃಷ್ಣಮೂರ್ತಿ, ೨೦೦೨, ಸಂಸ್ಕೃತಿ ಕಥನ, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಪುಟ: ೧೭೪.
೨. ಅದೇ, ಪುಟ: ೧೭೪.
೩. ಸಾತಿ ಸುಂದರೇಶ್, ಭಾವೈಕ್ಯತಾ ಕೇಂದ್ರ ಬಾಬಾಬುಡನ್‌ಗಿರಿ, ೨೦೦೩, ಬೆಂಗಳೂರು: ನವಕರ್ನಾಟಕ ಪ್ರಕಾಶನ. ಪುಟ: ೧೨
೪. ಬಾಬಾ-ದತ್ತ ವಿವಾದದ ಸುತ್ತ, ಕರ್ನಾಟಕ ಕೋಮು ಸೌಹಾರ್ದ ವೇದಿಕೆ ತಯಾರಿಸಿದ ಅಧ್ಯಯನ ವರದಿ, ೨೦೦೫, ಪುಟ: ೭೬.
೫. ಸಾತಿ ಸುಂದರೇಶ್, ಭಾವೈಕ್ಯತಾ ಕೇಂದ್ರ ಬಾಬಾಬುಡನ್‌ಗಿರಿ, ೨೦೦೩, ಬೆಂಗಳೂರು: ನವಕರ್ನಾಟಕ ಪ್ರಕಾಶನ. ಪುಟ: ೫
೬. ಬಾಬಾ-ದತ್ತ ವಿವಾದದ ಸುತ್ತ, ಕರ್ನಾಟಕ ಕೋಮು ಸೌಹಾರ್ದ ವೇದಿಕೆ ತಯಾರಿಸಿದ ಅಧ್ಯಯನ ವರದಿ, ೨೦೦೫, ಪುಟ: ೬೩-೬೪.
೭. ರೋಮಿಲಾ ಥಾಪರ್, 'ನಂಬಿಕೆ ಮತ್ತು ಚರಿತ್ರೆ, ಹೊಂದಿಕೊಳ್ಳದ ಬೆಸುಗೆ', ಅನು: ಶ್ರೀನಿವಾಸರಾಜು, 'ಕನ್ನಡ ಟೈಮ್ಸ್' ವಾರ ಪತ್ರಿಕೆ, ಸಂ: ಕೆ.ಎಲ್. ಚಂದ್ರಶೇಖರ್, ಸಂಪುಟ: ೧, ಸಂಚಿಕೆ: ೩೨, ಅಕ್ಟೋಬರ್ ೧೨, ೨೦೦೭.
೮. ಅದೇ.
೯. ಅದೇ.

## ಅಧ್ಯಾಯ ೪

# ರಾಮ, ಮತೀಯವಾದ ಮತ್ತು ರಾಜಕಾರಣ

ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಉದ್ಭವವಾದ ರಾಮಜನ್ಮ ಭೂಮಿ ವಿವಾದ ಭಾರತದ ಬಹು ದೊಡ್ಡ ರೋಗಗಳಲ್ಲಿ ಒಂದು. ಅಲ್ಲದೆ ಒಳಗೇ ಕೆಂಡವನ್ನು ತುಂಬಿಕೊಂಡು ಯಾವತ್ತೂ ಹೊಗೆಯಾಡುವಂಥದ್ದು. ೧೫೨೮-೨೯ ರಲ್ಲಿ ನಿರ್ಮಿಸಲಾದ ಬಾಬರಿ ಮಸೀದಿ, ಶ್ರೀರಾಮನ ದೇವಾಲಯವನ್ನು ಉರುಳಿಸಿ, ದೇವಾಲಯದ ಜಾಗದಲ್ಲಿ ನಿರ್ಮಾಣವಾಗಿರುವಂಥದ್ದು, ಅದು ರಾಮನ ಜನ್ಮಭೂಮಿ ಎಂದು ಸಂಘ ಪರಿವಾರಗಳು, ಅದರಲ್ಲೂ ಮುಖ್ಯವಾಗಿ ವಿಶ್ವ ಹಿಂದು ಪರಿಷತ್ತು ಪ್ರತಿಪಾದಿಸುತ್ತಿದೆ. ಹೀಗೆ ನಂಬಿಕೊಂಡಿರುವ ಸಂಘಪರಿವಾರಗಳು, ಲಕ್ಷಾಂತರ ಜನರ ಕರಸೇವೆಯೊಂದಿಗೆ ೧೯೯೨ ಡಿಸೆಂಬರ್ ೬ ರಂದು ಮಸೀದಿಯನ್ನು ಕೆಡವಿದ್ದಾರೆ. ಮತ್ತೆ ರಾಮಮಂದಿರವನ್ನು ನಿರ್ಮಿಸಿ ೧೬ನೇ ಶತಮಾನದಲ್ಲಿ ಬಾಬರನಿಂದಾದ 'ತಪ್ಪ'ನ್ನು ಸರಿಪಡಿಸಲು ದೇಶದ ಉದ್ದಗಲದಿಂದಲೂ ಇಟ್ಟಿಗೆಯನ್ನು ತರಿಸಿಕೊಂಡದ್ದೂ ಮುಗಿದಿದೆ. ರಾಮನಂಥ ದೇವರ ಬಗೆಗಿರುವ ಜನತೆಯ ಮುಗ್ಧ ಭಕ್ತಿ ಮತ್ತು ಪ್ರೀತಿಯನ್ನು ತಮ್ಮ ಸಿದ್ಧಾಂತಗಳಿಗೆ ಧಾರೆ ಎರೆದುಕೊಂಡ ಸಂಘಪರಿವಾರದ ಸಂಘಟನೆಗಳು ಈ ವಿವಾದದಿಂದ ಭದ್ರವಾಗಿ ನೆಲೆಯೂರಿಕೊಂಡಿವೆ. ಸಂಘಪರಿವಾರದ ರಾಜಕೀಯ ಮುಖವಾಣಿಯಾದ ಭಾರತೀಯ ಜನತಾ ಪಕ್ಷ ಈ ಅಯೋಧ್ಯಾ ವಿವಾದದಿಂದ ಅಧಿಕಾರದ ಸವಿಯನ್ನೂ ಕಂಡಿದೆ.

ಆದರೆ ರಾಮಜನ್ಮ ಭೂಮಿಯ ಬಗೆಗೆ ಸಂಘಪರಿವಾರಗಳು ಮಾಡುವ ವಾದ ಶುದ್ಧ ಸುಳ್ಳು, ಅಲ್ಲಿ ರಾಮ ಮಂದಿರ ಇರಲೇ ಇಲ್ಲ ಎಂದು ಆರ್.ಎಸ್. ಶರ್ಮಾರಂಥ ಇತಿಹಾಸಕಾರರು ಸಾಬೀತುಪಡಿಸಿದ್ದಾರೆ. ವಿಶ್ವ ಹಿಂದೂ ಪರಿಷತ್ ತನ್ನ ಪ್ರತಿಪಾದನೆಗಳಿಗೆ ಪುರಾವೆಯಾಗಿ ಕೊಡುವ ಸಂಸ್ಕೃತ ಗ್ರಂಥ 'ಸ್ಕಂದ ಪುರಾಣ'ದಲ್ಲಿ ಪ್ರಸ್ತಾಪಿಸಲಾಗಿರುವ 'ಅಯೋಧ್ಯಾ ಮಹಾತ್ಮೆ' ಪ್ರಕ್ಷೇಪ ಎಂದು ಶರ್ಮಾ ತೋರಿಸಿಕೊಟ್ಟಿದ್ದಾರೆ. ಅಯೋಧ್ಯೆ ಯಾವತ್ತೂ ಹಿಂದುಗಳ ಪುಣ್ಯ ಸ್ಥಳವಾಗಲಿ, ಯಾತ್ರಾ ಸ್ಥಳವಾಗಲಿ ಆಗಿರಲಿಲ್ಲವೆಂದು ದಾಖಲಿಸಿದ್ದಾರೆ. ಕ್ರಿ.ಶ. ೧೫೭೬ ರಲ್ಲಿ 'ರಾಮಚರಿತ ಮಾನಸ' ಬರೆದ ತುಳಸಿದಾಸರು, ರಾಮ ಮಂದಿರವನ್ನು ಒಡೆದು ಮಂದಿರ ನಿರ್ಮಿಸಿದ್ದೇ ಆಗಿದ್ದರೆ ಅದನ್ನು ತನ್ನ

ಕಾವ್ಯದಲ್ಲಿ ಉಲ್ಲೇಖಿಸುತ್ತಿರಲಿಲ್ಲವೇ? ಎಂಬ ನ್ಯಾಯಬದ್ಧ ಪ್ರಶ್ನೆಯನ್ನು ಶರ್ಮಾ ಎತ್ತಿದ್ದಾರೆ.[೨] ಸಂಘಪರಿವಾರಕ್ಕೆ ಇಂಥ ಪ್ರಶ್ನೆಗಳಿಗೆ ಉತ್ತರಿಸುವ ಸಾಮರ್ಥ್ಯ ಮತ್ತು ಸಹನೆ ಇಲ್ಲ. ಯಾವತ್ತೂ ಇವರ ಸಿದ್ಧಾಂತಗಳು ಆರೋಗ್ಯಕರ ಸಂವಾದದ ಮೂಲಕ, ಪಾರದರ್ಶಕವಾಗಿ ರೂಪುಗೊಂಡವಲ್ಲ; ದಾಳಿ, ಕ್ರೌರ್ಯ, ಅಸಂಗತ ವಿಚಾರಗಳಿಂದ ರೂಪುಗೊಂಡಂಥವು.

ಈ ವಿವಾದವನ್ನು, ಇದರ ಹಿಂದಿರುವ ಕೋಮುವಾದಿಗಳ ಹುನ್ನಾರವನ್ನು ಕನ್ನಡ ಸಂಸ್ಕೃತಿ ಚಿಂತನೆ ಸಂವಾದಕ್ಕೆ ಗುರಿಪಡಿಸಿದೆ. ಸಾಂಸ್ಕೃತಿಕ ಕಟ್ಟಡಗಳು ಹಾಗೂ ದೈವಗಳು ಕೋಮುವಾದಿ ಪ್ರತಿಮೆಗಳಾಗುವ ಕ್ರಮವನ್ನು ಮುಂದಿನ ಅಧ್ಯಾಯವೊಂದರಲ್ಲಿ ವಿವರಿಸಿದ್ದೇನೆ. ರಾಮಮಂದಿರ ವಿವಾದವೂ ಆ ಅಧ್ಯಾಯದಲ್ಲೇ ಸೇರಿಸಬಹುದಾದದ್ದು. ಆದರೂ ಮುಖ್ಯವಾದ ಚರ್ಚೆಯಾದ್ದರಿಂದ ಇದನ್ನೆ ಪ್ರತ್ಯೇಕವಾದ ಅಧ್ಯಾಯ ಮಾಡಿಕೊಂಡಿದ್ದೇನೆ. ಈ ಚರ್ಚೆಗೆ ಸಂಬಂಧಿಸಿದಂತೆ ಮುಖ್ಯವಾಗಿ ಕೆ. ವಿ. ಸುಬ್ಬಣ್ಣ, ಪಿ. ಲಂಕೇಶ್ ಮತ್ತು ಡಿ.ಆರ್. ನಾಗರಾಜ್ ಅವರು ಮಾಡಿರುವ ಚಿಂತನೆಗಳನ್ನು ಗಮನಿಸಿದ್ದೇನೆ.

### ೪.೧ ಪಿ. ಲಂಕೇಶರ ಗ್ರಹಿಕೆಗಳು

'ಇಟ್ಟಿಗೆ ಪವಿತ್ರವಲ್ಲ; ಜೀವ ಪವಿತ್ರ' ಎಂಬುದು ಕನ್ನಡ ಸಂಸ್ಕೃತಿ ಚಿಂತನೆಯಲ್ಲಿ ಲಂಕೇಶರಿಂದ ರೂಪುಗೊಂಡ ಮಾನವೀಯ ಘೋಷಣೆ. ಕೋಮುವಾದಗಳಂಥ ಜೀವವಿರೋಧಿ ಶಕ್ತಿಗಳನ್ನು ವಿರೋಧಿಸುತ್ತಲೇ ಬದುಕಿದ ಲಂಕೇಶರು, ಜಾತ್ಯತೀತ ಮತ್ತು ಮತನಿರಪೇಕ್ಷತೆಯನ್ನು ನಿರಂತರವಾಗಿ ಪ್ರತಿಪಾದಿಸುತ್ತಾ ಬಂದರು.

ರಾಮಜನ್ಮಭೂಮಿಯ ವಿವಾದವನ್ನು ಕುರಿತು ಚಿಂತಿಸುವಾಗ ಲಂಕೇಶರು ಭಾರತದ ಇತಿಹಾಸ ಮತ್ತೆ ಮತ್ತೆ ಸಾರುವಂತೆ ಇಲ್ಲಿ ಧರ್ಮಾಂಧತೆ, ಮೂಢನಂಬಿಕೆ, ಅನೈಕ್ಯ ತಲೆದೋರಿದಾಗಲೆಲ್ಲ ಪರಕೀಯರ, ಸರ್ವಾಧಿಕಾರಿಗಳ ಹೊಡೆತಕ್ಕೆ ಸಿಕ್ಕಿ ಜನಸಾಮಾನ್ಯರು ಧ್ವಂಸವಾಗಿದ್ದಾರೆ ಎಂಬ ವಾಸ್ತವವನ್ನು ಆತಂಕ ಮತ್ತು ಎಚ್ಚರಿಕೆಯ ಧ್ವನಿಯಲ್ಲಿ ಹೇಳಿದ್ದಾರೆ.[೩] ಅವರೇ ಹೇಳುವಂತೆ ಸರಳ ವ್ಯವಹಾರಜ್ಞಾನ ಮತ್ತು ಕಾಮನ್‌ಸೆನ್ಸ್ ಕೂಡ ಇಲ್ಲದ ಜನ ಎಬ್ಬಿಸಿರುವ ರಾಮಜನ್ಮಭೂಮಿ ಮತ್ತು ಬಾಬರಿ ಮಸೀದಿಯ ವಿವಾದದ ಸಂಘರ್ಷಗಳನ್ನು ನೆನೆದರೆ ಭಾರತಕ್ಕೊಂದು ನಿರುಮ್ಮಳವಾದ ಭವಿಷ್ಯ ಇಲ್ಲ ಅನ್ನಿಸುತ್ತದೆ. ಜಾತಿ ಮತ್ತು ಧರ್ಮಗಳಿಗಾಗಿ ಪ್ರಾಣಬಿಡುವ, ತೆಗೆವ ಜಾತಿವಾದಿಗಳು, ಧರ್ಮಾಂಧರು ಇದ್ದಾರೆ. ರಾಜಕಾರಣಿಗಳು ದೇಶವನ್ನು ಮುಕ್ಕಿಕೊಳ್ಳುತ್ತಿದ್ದಾರೆ. ಎಲ್ಲ ಅಭಿವೃದ್ಧಿ ಯೋಜನೆಗಳು ಅಂತಿಮವಾಗಿ ಮೇಲ್ವರ್ಗದ ಒಳಿತನ್ನು ಕಾಯ್ದುಕೊಳ್ಳುವಂತೆ ರೂಪುಗೊಳ್ಳುತ್ತಿವೆ. ಎಂದಿನಂತೆ ಮಧ್ಯಮವರ್ಗ ಹಿಟ್ಟು-ಬಟ್ಟೆ, ಮದುವೆ-ಮೈಥುನದಲ್ಲೇ ಕಳೆದುಹೋಗುತ್ತಿದೆ. ನಡುವೆ ಬಡತನ, ಅನಕ್ಷರತೆ ಮೆರೆದಿವೆ. ಇದು ಲಂಕೇಶರ ಮುಖ್ಯ ಆತಂಕ. ಈ ಆತಂಕವನ್ನು

ನೆನೆದರೆ ಇಂಥ ಆಲೋಚನಾ ಹೀನ ಸ್ಥಿತಿಗಳಿಂದಲೇ ಇಂದು ಕೂಡ ಜಾಗತೀಕರಣದಂಥ ಕಲೋನಿಯಲಿಸಂನ ಹೊಸ ಆವೃತ್ತಿಗಳು ಭದ್ರವಾಗಿ ನೆಲೆಯೂರುತ್ತಿವೆ ಅನ್ನಿಸುತ್ತದೆ.

ರಾಮ ಎನ್ನುವ ಕಾವ್ಯ ನಾಯಕನನ್ನು ಮತಾಂಧ ಶಕ್ತಿಗಳು ರಾಜಕೀಯ ಲಾಭಕ್ಕಾಗಿ ವಿಕಾರಗೊಳಿಸಿ, ಜನರ ನಂಬಿಕೆಯನ್ನು ತಿರುಚಿ ಅವರನ್ನು ಧರ್ಮಾಂಧರನ್ನಾಗಿಸುವವರ ಬಗೆಗೆ ಲಂಕೇಶರಿಗೆ ಆಳವಾದ ತಿರಸ್ಕಾರವಿದೆ. ಮೊದಲು ಜನರ ಈ ವಿಕಾರ ನಂಬಿಕೆಗಳನ್ನು ಇಲ್ಲವಾಗಿಸಿ ಅವರನ್ನು ಚಿಂತನಾಪರರನ್ನಾಗಿ ಮಾಡಬೇಕಾಗಿದೆ. ಹೀಗಾಗಿ ಮತಾಂಧರಿಂದ ತಿರುಚಿಕೊಂಡಿರುವ ಸಾಮಾನ್ಯ ಜನರ ಮನಸ್ಸನ್ನು ಸ್ವಸ್ಥಗೊಳಿಸಲು ಲಂಕೇಶರು ಯತ್ನಿಸಿದ್ದಾರೆ.

ಕಾವ್ಯದ ನಾಯಕನನ್ನು ಚರಿತ್ರೆಯ ಪುರುಷನನ್ನಾಗಿಸಿ, ರಾಮನಿಂದ ದೀಕ್ಷೆಗೊಂಡವರಂತೆ ತ್ರಿಶೂಲ ಝಳಪಿಸುವ ಕೋಮುವಾದಿಗಳ ತಿಳುವಳಿಕೆಯನ್ನು ಲಂಕೇಶರು ಗ್ರಹಿಸುವುದು ಹೀಗೆ: 'ಅದೆಷ್ಟೇ ಮೌಢ್ಯದಿಂದ ಕಲ್ಪಿಸಿಕೊಂಡರೂ ರಾಮಾಯಣ ಮತ್ತು ಮಹಾಭಾರತಗಳು ಚರಿತ್ರೆ ಎಂದು ವಾದಿಸುವುದು ಸಾಧ್ಯವಿಲ್ಲ; ಅವು ಈ ದೇಶದ ಎಲ್ಲ ಜಾತಿಯ, ಎಲ್ಲ ವರ್ಗದ ಜನರ ಹೆಮ್ಮೆಯ ಮಹಾಕಾವ್ಯಗಳು. ರಾಮಾಯಣ ನಡೆದ ಕತೆ ಎನ್ನುವುದು ನಿಜವಾದರೆ 'ಕಾನೂರು ಹೆಗ್ಗಡಿತಿ'ಯ ಹೂವಯ್ಯನ ಕೃತ್ಯಗಳು ನಡೆದ ಸ್ಥಳಗಳಿಗಾಗಿ ಹುಡುಕಾಡಬೇಕಾಗುತ್ತದೆ. ಪುಷ್ಪಕ ವಿಮಾನದ ಚಾಲಕರಿಂದ ಚೆಡ್ಡಿಗಳು ತರಬೇತಿ ಪಡೆಯಬೇಕಾಗುತ್ತದೆ: ಮಹಾಕಾವ್ಯದ ಘಟನೆಗಳನ್ನು ಮೆಚ್ಚಿ ಸ್ಥಳಗಳಿಗೆ ಅವುಗಳ ಹೆಸರಿಟ್ಟಿರುವುದನ್ನು ನೆನೆದು ಇವತ್ತು ಭಾರತದ ರಾಮ, ಲಕ್ಷ್ಮಣರನ್ನೆಲ್ಲ ಮಹಾಕಾವ್ಯದ ರಾಮ ಲಕ್ಷ್ಮಣರ ಆಧುನಿಕ ಅವತಾರಗಳೆಂದು ಪರಿಗಣಿಸಬೇಕಾಗುತ್ತದೆ'.[೩]

ನಾವು ಐತಿಹಾಸವನ್ನು ಅರಿತು ವರ್ತಮಾನವನ್ನು ನಿರ್ಮಿಸಿಕೊಳ್ಳಬೇಕೇ ಹೊರತು, ಇತಿಹಾಸವನ್ನು ಅನುಸರಿಸಿ ವರ್ತಮಾನವನ್ನು ಅದರ ಹಿಂಬಾಲಕನಂತೆ ನಿರ್ಮಿಸಬಾರದು. ಇಂದು ಹಿಂದುತ್ವವಾದಿಗಳು ಚರಿತ್ರೆಯನ್ನು ತಿರುಚುತ್ತಾ ತಮಗೆ ಬೇಕಾದಂತೆ ಅದನ್ನು ಕಟ್ಟಲು ಹೊರಟಿದ್ದಾರೆ. ಈ ಪುನರ್ ನಿರ್ಮಾಣದ ಅಪಾಯ ಅಂತಿಮವಾಗಿ ಅದರ ಕಾಲಬುಡಕ್ಕೆ ಬರುತ್ತದೆಂಬುದನ್ನು ಮರೆತಿದ್ದಾರೆ. ಮಸೀದಿಯನ್ನು ಕೆಡವಿ ಚರಿತ್ರೆಯನ್ನು ಪುನರ್ ನಿರ್ಮಿಸುವುದಾದರೆ, ಹಿಂದುಗಳು ನಾಶಮಾಡಿದ ಬೌದ್ಧ ಮಂದಿರಗಳನ್ನು ಮತ್ತೆ ಸ್ಥಾಪಿಸಬೇಕಾಗುತ್ತದೆ. ಶೈವ ಮತ್ತು ವೈಷ್ಣವರು, ಜೈನರು ತಾವೆಲ್ಲ ಪರಸ್ಪರ ಕಾದಾಡಿ ಕಳೆದುಕೊಂಡದ್ದನ್ನೆಲ್ಲ ಮರು ರೂಪಿಸಬೇಕಾಗುತ್ತದೆ. ಪುನರ್ ನಿರ್ಮಾಣದ ಅಪಾಯ ಎಲ್ಲಿಗೆ ಸಾಗುತ್ತದೆ ಎಂಬುದರ ಬಗೆಗೆ ಮತೀಯವಾದಿಗಳು ಅಜ್ಞಾನಿಗಳಾಗಿದ್ದಾರೆ.

ರಾಮ ಮಂದಿರ ವಿವಾದ ಅಷ್ಟು ತೀವ್ರವಾಗಿ ಬೆಳೆಯಲು ಹಿಂದೂ ಮತ್ತು ಮುಸಲ್ಮಾನ ಮತೀಯವಾದಿಗಳು ಕಾರಣ ಎಂದು ಗ್ರಹಿಸಿದರೂ, ಈ ಮತೀಯ ಭಾವನೆಗಳು

ಚಿಗುರೊಡೆದದ್ದು ಬ್ರಿಟಿಷ್ ರೆಸಿಡೆಂಟರ ಪೂರ್ವನಿಯೋಜಿತ ಹುನ್ನಾರ ಎಂಬುದನ್ನು ಲಂಕೇಶರು ಖಚಿತವಾಗಿ ಕಂಡಿದ್ದಾರೆ. ಈ ಕುರಿತಾದ ಸಿ. ರಾಜೇಶ್ವರರಾವ್ ಮತ್ತು ಶಮೀಮ್ ಫೈಜಿಯವರ ನೋಟವನ್ನು ಒಪ್ಪಿ, ಅದನ್ನು ಕನ್ನಡ ಚಿಂತನೆಯಲ್ಲಿ ವಿಸ್ತರಿಸಿದ್ದಾರೆ. ಆ ಮೂಲಕ ಅಯೋಧ್ಯಾ ವಿವಾದದ ಬಗೆಗೆ ಉರಿಯುತ್ತಿರುವ ಎರಡೂ ಬದಿಯ ಮತೀಯವಾದಿಗಳ ಮನಸ್ಸಿಗೆ ಸತ್ಯವನ್ನು ಕಾಣಿಸುವ ಪ್ರಯತ್ನ ಮಾಡಿದ್ದಾರೆ.

ಸಿಪಾಯಿದಂಗೆಯ ಸಮಯದಲ್ಲಿ ಹಿಂದೂ, ಮುಸಲ್ಮಾನರ ಐಕ್ಯತೆ ಬ್ರಿಟಿಷರಲ್ಲಿ ಭಯವನ್ನು ಮೂಡಿಸಿತ್ತು. ಈ ಐಕ್ಯತೆಯ ಶಕ್ತಿಯನ್ನು ಒಡೆಯುವುದು ಅವರ ಮುಖ್ಯ ಸಂಚಾಗಿತ್ತು. ಭಾರತದಲ್ಲಿ ಪ್ರಬಲವಾಗಿದ್ದ ಈ ಎರಡೂ ಕೋಮಿನ ಐಕ್ಯತೆ ಮತ್ತು ಶಕ್ತಿಯನ್ನು ಒಡೆಯಲು ಬ್ರಿಟಿಷ್ ಆಡಳಿತಷಾಹಿಯೇ ಮೊದಲಿಗೆ ಮಸೀದಿಯ ಮುಂದುಗಡೆ ಹಿಂದೂ ವೇದಿಕೆಯೊಂದನ್ನು ನಿರ್ಮಿಸಿ, ಈ ವೇದಿಕೆ ಮತ್ತು ಮಸೀದಿಯ ನಡುವೆ ಬೇಲಿ ಹಾಕಿದ್ದು, ಆಗಲೂ ಹಿಂದೂ, ಮುಸ್ಲಿಮರು ಆಕ್ರೋಶಗೊಳ್ಳದೆ ಹೋದದ್ದು, ಆಗ ಬ್ರಿಟಿಷ್ ರೆಸಿಡೆಂಟ್ ಮಸೀದಿಯನ್ನು ಪ್ರವೇಶಿಸುವವರು ಉತ್ತರದ ಬಾಗಿಲಿನಿಂದ ಮಾತ್ರ ಪ್ರವೇಶಿಸಬೇಕೆಂದು ಆಜ್ಞೆ ಹೊರಡಿಸಿದ್ದು; ಅಲ್ಲದೆ ಬ್ರಿಟಿಷ್ ರೆಸಿಡೆಂಟೇ ಹಿಂದೂಗಳಿಗೆ ಹಚ್ಚಿಕೊಟ್ಟು ವೇದಿಕೆ ಇದ್ದ ಸ್ಥಳ ರಾಮ ಜನ್ಮಭೂಮಿಯಾಗಿತ್ತೆಂದು ವಾದಿಸಲು ಪ್ರೇರೇಪಿಸಿದ್ದು– ಹೀಗೆ ಈ ಎರಡೂ ಕೋಮಿನ ಸಾಮರಸ್ಯವನ್ನು ಹಾಳುಮಾಡಿದ್ದು ಬ್ರಿಟಿಷ್ ಆಡಳಿತಶಾಹಿಯ ಕುತಂತ್ರ ಎಂಬುದು ಲಂಕೇಶರ ಖಚಿತ ನಿಲುವು.

ರೆಸಿಡೆಂಟನ ಈ ಆಜ್ಞೆಯನ್ನು ಮೀರಿ, ಈ ಒಡಕಿನ ಹುನ್ನಾರವನ್ನರಿತ ಹಿಂದೂ-ಮುಸ್ಲಿಮರು ೧೮೫೫ ರಲ್ಲಿ ಸಹಬಾಳ್ವೆಯ ಒಪ್ಪಂದ ಮಾಡಿಕೊಂಡಿದ್ದಾರೆ. ಇದರಿಂದ ಕೋಪಗೊಂಡ ಆ ರೆಸಿಡೆಂಟ್ ಈ ಒಪ್ಪಂದಕ್ಕೆ ಕಾರಣರಾದ ಮತ್ತು ಅದಕ್ಕೆ ಸಹಿ ಹಾಕಿದ ಹಿಂದೂ ಮುಸ್ಲಿಂ ಹಿರಿಯರಿಗೆ ಮರಣದಂಡನೆ ವಿಧಿಸಿದ. ಅವರನ್ನು ನೇತುಹಾಕಲಾದ ಫೈಜಾಬಾದ್ ಪಕ್ಕದ ಗೋಳೀಮರ ಹಿಂದೂ ಮುಸ್ಲಿಮರ ಬಾಂಧವ್ಯಕ್ಕೆ ಸಂಕೇತವೂ ಸ್ಮಾರಕವೂ ಆಗಿದೆ.[೪]

ಬ್ರಿಟಿಷ್ ರೆಸಿಡೆಂಟ್ ಮಸೀದಿಯ ಮುಂದೆ ಸ್ಥಾಪಿಸಿದ ಹಿಂದೂ ವೇದಿಕೆಯ ಮೇಲೆ ದೇವಸ್ಥಾನವನ್ನು ಕಟ್ಟಲು ೧೮೫೮ ರಲ್ಲಿ ಮೊದಲ ಬಾರಿಗೆ ಮಹಂತನೊಬ್ಬ ಸಲ್ಲಿಸುವ ಅರ್ಜಿಯಿಂದ ಹಿಡಿದು, ೧೯೪೯ರ ಡಿಸೆಂಬರ್ ೨೨ ಮತ್ತು ೨೩ ರ ಮಧ್ಯರಾತ್ರಿ ಹಿಂದೂ ಮತೀಯವಾದಿಗಳು ಮಸೀದಿಗೆ ರಾಮ, ಲಕ್ಷ್ಮಣ, ಸೀತೆಯ ವಿಗ್ರಹಗಳನ್ನು ಸಾಗಿಸುವವರೆಗಿನ ಪೂರ್ವನಿಶ್ಚಿತ ಸಂಗತಿಗಳನ್ನು ಲಂಕೇಶರು ಕಾಣಿಸಿದ್ದಾರೆ. ಹೀಗೆ ಹೊಸದಾಗಿ ಉದ್ಭವವಾದ ಈ ದೇವರುಗಳ ಕಾಲವನ್ನು ನಟರಾಜ್ ಹುಳಿಯಾರ್ 'ಹಳೆಯ ದೇವರುಗಳೆಲ್ಲ ಸತ್ತು ಹೊಸ ದೇವರುಗಳು ಹುಟ್ಟುವ ಕಾಲವೆಂದೂ, ಎಲ್ಲ ವಸಾಹತು ಜಗತ್ತುಗಳಲ್ಲೂ ಇಂಥದೇ ಸಂಕ್ರಮಣ ಸ್ಥಿತಿಯ ಗೊಂದಲವಿರುತ್ತದೆಂದೂ' ಹೇಳುತ್ತಾರೆ.[೫]

ಜನಸಾಮಾನ್ಯರ ನಂಬಿಕೆಗಳ ಮೌಢ್ಯವನ್ನು ಆಧಾರವಾಗಿಟ್ಟುಕೊಂಡು ಸೃಷ್ಟಿಯಾದ ಅಪಾಯಕಾರಿ, ಅಸಂಗತ ಗ್ರಹಿಕೆಗಳಿಂದ ಹೊರಬರಲು ಚರಿತ್ರೆಯನ್ನು ಸರಿಯಾಗಿ ಅರಿಯಬೇಕಿದೆ. ಇಂಥ ಪಾರದರ್ಶಕ ಅರಿವಿಗೆ ಲಂಕೇಶರ ಈ ನೋಟಕ್ರಮಗಳು ಅಗತ್ಯ ಮಾರ್ಗಗಳನ್ನು ತೆರೆಯುತ್ತವೆ. ವರ್ತಮಾನದ ಕೋಮು ವಿಕಾರಗಳಿಗೆ, ಮೆಳ್ಳಗಣ್ಣ ನೋಟಗಳಿಗೆ, ಚರಿತ್ರೆ ಅವರವರ ಇಚ್ಛೆಯ ಸಾಕ್ಷ್ಯಗಳನ್ನು ಒದಗಿಸುವ ದಾಖಲೆ ಮಾತ್ರವಲ್ಲ ಎಂಬ ಅರಿವಿನಲ್ಲಿ, ಲಂಕೇಶರ ಈ ಚರಿತ್ರೆಯ ನಿಜಗ್ರಹಿಕೆ ಹೊರಡುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಮೇಲ್ಜಾತಿಯ ಆಲೋಚನೆಗಳಾಗಿದ್ದ ಮತೀಯವಾದಿ ಚಿಂತನಾಕ್ರಮಗಳು, ೧೯೫೦ ರ ವೇಳೆಗಾಗಲೇ ಭಾರತದ ಇತರ ಜಾತಿಗಳಲ್ಲೂ ಹಬ್ಬತೊಡಗಿದ್ದವು. ಮತೀಯವಾದಿಗಳು ಸತ್ಯ, ಸುಳ್ಳುಗಳನ್ನೇ ಬಂಡವಾಳ ಮಾಡಿಕೊಂಡರು. ಮುಸಲ್ಮಾನರಲ್ಲೂ ಕೋಮುವಾದಿಗಳು ಈ ವಿವಾದವನ್ನು ಲಾಭದಾಯಕ ಉದ್ಯೋಗವಾಗಿ ಕಾಣಲಾರಂಭಿಸಿದರು. ಪ್ರತ್ಯೇಕತೆಯ ಕೂಗು ಇದ್ದ ಆ ಕಾಲದಲ್ಲಿ ಹಿಂದೂ, ಮುಸ್ಲಿಮರ ಪ್ರತ್ಯೇಕತಾವಾದಿ ಆಲೋಚನೆಗಳು ಬಹು ಬೇಗ ಚಿಗುರಿ ಕವಲೊಡೆದವು. "೧೯೫೦ ರಲ್ಲಿ ಗೋಪಾಲಸಿಂಗ್ ವಿಶಾರದ ಎಂಬುವವನು ವಿವಾದಕ್ಕೊಳಗಾದ ಕಟ್ಟಡವೇ ರಾಮಜನ್ಮಭೂಮಿ ಎಂದೂ, ಅಲ್ಲಿ ದೇವಾಲಯವನ್ನು ಕಟ್ಟಲು ಅನುಮತಿ ಕೊಡಬೇಕೆಂದೂ ಫೈಜಾಬಾದ್ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿದ. ಅದೇ ಬೇಡಿಕೆ ಇಟ್ಟು ೧೯೫೯ ರಲ್ಲಿ ನಿರ್ಮೋಹಿ ಎಂಬುವವನೊಬ್ಬ ಅರ್ಜಿ ಹಾಕಿಕೊಂಡ; ೧೯೬೧ ರ ಹೊತ್ತಿಗೆ ಮುಸ್ಲಿಮರು ಚುರುಕಾಗಿ ವಕ್ಫ್ ಮಂಡಲಿಗೆ ಸೇರಿದ ಜಾಗವೆಂದು ಅರ್ಜಿ ಸಲ್ಲಿಸಿದರು. ಒಂದೇ ಆಸ್ತಿಯ ಮೇಲೆ ಮೂರು ಮೊಕದ್ದಮೆಗಳು ಸೇರಿಕೊಂಡವು. ಇದೇ ಸುಸಮಯವೆಂದು ಹಿಂದೂ, ಮುಸ್ಲಿಂ ಅವಾಂತರಕಾರಿಗಳು, ಲಂಕೇಶರು ಹೇಳುವಂತೆ 'ನ್ಯಾಯಾಲಯದ ಮೊಕದ್ದಮೆ ಗೆಲ್ಲುವುದಕ್ಕಾಗಿ' ಎಂದು ತಮ್ಮ ತಮ್ಮ ಜನರಿಂದ ಹಣ ವಸೂಲಿ ಮಾಡತೊಡಗಿದರು. ಬಾಬರಿ ಮಸೀದಿ ಮತ್ತು ರಾಮ ಜನ್ಮಭೂಮಿಯ ಹೆಸರಿನಲ್ಲಿ ಖದೀಮರು ಜೇಬುತುಂಬಿಕೊಳ್ಳತೊಡಗಿದರು".[೬]

## ೪.೨ ಕೆ.ವಿ. ಸುಬ್ಬಣ್ಣನರವರ ಗ್ರಹಿಕೆಗಳು

ದೇವರುಗಳ ಹೆಸರಿನಲ್ಲಿ ಇಡೀ ಜನಸಮುದಾಯವನ್ನು ನಿಯಂತ್ರಿಸಿಕೊಂಡು ಬಂದು ರೂಢಿಯಾಗಿರುವ ಪುರೋಹಿತಶಾಹಿಗಳು, ತಮ್ಮ ಮೂಲಭೂತವಾದಕ್ಕೆ ಪೂರಕ ಶಕ್ತಿಯನ್ನು ಪಡೆದಿದ್ದೇ ದೇವರ ಬಗೆಗಿರುವ ಮುಗ್ಧ ಜನರ ಭಕ್ತಿಯ ದುರುಪಯೋಗದ ಮೂಲಕ. ಈ ಭಕ್ತಿಯನ್ನು ಸಾಮುದಾಯಿಕ ಅಹಂ ಆಗಿ ಪರಿವರ್ತಿಸಿದವರೂ ಇವರೇ. ಲೋಕಾತೀತವಾದ ಎಲ್ಲವನ್ನೂ ಮೀರಿ ಸಾಮಾನ್ಯ ಮನುಷ್ಯನಂತೆ ಬದುಕಿ, ತಾನು ಶಾಸನ ಮಾಡುವವನಾದರೂ, ತಾನು ರೂಪಿಸಿದ ಶಾಸನಗಳಿಗೆ ತಾನೇ ಮೊದಲು

ತಲೆಬಾಗುತ್ತಿದ್ದ ರಾಮನನ್ನು ಹಿಂದು ಮತೀಯವಾದಿಗಳು ತಮ್ಮ ದಮನಕ್ಕೆ ಪ್ರತಿನಿಧಿಯನ್ನಾಗಿ ಮಾಡಿಕೊಂಡರು. ಸಾಮುದಾಯಿಕ ಪ್ರತಿಮೆಯಾಗಿದ್ದ ರಾಮನನ್ನು ತಮ್ಮ ಜೈಕಾರಕ್ಕೆ ಬಳಸಿಕೊಂಡ ಮತಾಂಧರ ತಂತ್ರಗಳನ್ನು ಸುಬ್ಬಣ್ಣನವರು ಭಿನ್ನವಾಗಿ ಮನಗಾಣಿಸಿದ್ದಾರೆ.

'ರಾಮನು ತನ್ನನ್ನು ದಿನದಿನವೂ ಬೇಯಿಸಿಕೊಳ್ಳುತ್ತಲೇ ಬಾಳಿದ: ತನ್ನ ಅರ್ಧಾಂಗಿಯಾದ ಸೀತೆಯನ್ನು ಬೆಂಕಿಗೆ ಹಾಕಿ ಪರೀಕ್ಷಿಸಿದ. ಕುವೆಂಪು ರಾಮಾಯಣದಲ್ಲಿ ಸೀತೆಯ ಜತೆಯಲ್ಲಿ ರಾಮನೂ ಅಗ್ನಿ ಪ್ರವೇಶ ಮಾಡುತ್ತಾನೆ. ಅಡಿಗರು ಹೇಳುವ ಹಾಗೆ 'ಸುಟ್ಟಲ್ಲದೆ ಮುಟ್ಟನೆಂಬುಡಾಫೆ'ಯುವ ಆತ.[2] ರಾಮ ತನ್ನನ್ನು ಹೀಗೆ ಮತ್ತೆ ಮತ್ತೆ ಸುಟ್ಟುಕೊಳ್ಳುತ್ತಿದ್ದರಿಂದಲೇ ಗಾಂಧಿ ಮತ್ತು ಲೋಹಿಯಾ ಅವನನ್ನು ಮೆಚ್ಚಿಕೊಂಡಿದ್ದರು. ಲೋಹಿಯಾಗಂತು ರಾಮನು ಸೀಮಿತ ವ್ಯಕ್ತಿತ್ವದಲ್ಲೇ ಪೂರ್ಣತೆಯನ್ನು ಕಂಡುಕೊಂಡಿರುವ ಅತ್ಯುಚ್ಚ ಮಾದರಿ. ಇಂಡಿಯಾದ ಮನಸ್ಥಿತಿಯ ಬಹು ದೊಡ್ಡ ರೋಗವೆಂದರೆ, ತಾವು ದೇವರುಗಳಿಂದ ಎಷ್ಟು ರಕ್ಷಣೆಯನ್ನು ಬಯಸುತ್ತೇವೆಯೋ ಅಷ್ಟೇ ರಕ್ಷಣೆಯನ್ನು ದೇವರುಗಳೂ ಕೂಡ ತಮ್ಮಿಂದ ನಿರೀಕ್ಷಿಸುತ್ತವೆ ಎಂದು ನಂಬಿರುವುದು. ರಾಮ ಅನಾಥನಾಗಿದ್ದಾನೆ ಅಂದುಕೊಂಡು, ತಮ್ಮನ್ನ ಹಿಂದೂ ಧರ್ಮ ರಕ್ಷಕರೆಂದು ಸ್ವಯಂ ಕರೆದುಕೊಂಡ ಗುಂಪೊಂದು ರಾಮನನ್ನು ರಕ್ಷಿಸಲು ಮುಂದಾಗಿದ್ದು ಹೀಗೆಯೇ.

ಅಯೋಧ್ಯೆ ಎಂಬಲ್ಲಿ ೪೦೦ ವರ್ಷಗಳ ಹಿಂದೆ ಬಾಬರ ಕಟ್ಟಿಸಿದ ಮಸೀದಿ ಇದೆ, ಅದು ರಾಮನ ಜನ್ಮಸ್ಥಳವೆಂಬ ಅನುಮಾನ, ಅಭಿಪ್ರಾಯ ಹಾಗೂ ಮತ್ತೆ ಅಲ್ಲೇ ರಾಮ ಮಂದಿರವನ್ನು ನಿರ್ಮಿಸಬೇಕೆಂಬ ಒತ್ತಾಯ ಮತ್ತೆ ಮತ್ತೆ ಏಳುತ್ತಿದ್ದರೂ, ಅದಕ್ಕೊಂದು ತೀವ್ರತೆ ಬಂದು, ಕಾರ್ಯರೂಪಕ್ಕಿಳಿದದ್ದು ಈ ಧಾರ್ಮಿಕ ವಿವಾದವನ್ನು ರಾಜಕೀಯ ಪಕ್ಷಗಳು ತಮ್ಮ ಮೇಲೆಳೆದುಕೊಂಡ ನಂತರವೇ ಎಂಬುದನ್ನು ಸುಬ್ಬಣ್ಣ ಗ್ರಹಿಸಿದ್ದಾರೆ. ಭಾರತೀಯ ಜನತಾ ಪಕ್ಷ ಭೂತವನ್ನು ಆವಾಹಿಸಿಕೊಂಡು, ವರ್ತಮಾನವನ್ನು ಕೆರಳಿಸಿ ತಾನು ಅರಳಲು ಹೇಗೆ ಪ್ರಯತ್ನಿಸಿತು ಎಂದು ಸುಬ್ಬಣ್ಣ ವಿವರಿಸುತ್ತಾರೆ.

ಮುಸ್ಲಿಮರು ನಾಶಮಾಡಿರುವ, ಪರಿವರ್ತಿಸಿರುವ ಅಸಂಖ್ಯಾತ ಸ್ಥಳಗಳನ್ನು ಪುನರ್ ರೂಪಿಸ ಬಯಸುವ ಆಲೋಚನೆಯೇ ಅಸಮಂಜಸ ಎಂಬುದು ಸುಬ್ಬಣ್ಣನವರ ವಾದ. ೩೦೦೦ ಕ್ಕೂ ಹೆಚ್ಚಿನ ಸ್ಥಳಗಳನ್ನು ಪುನರ್ ರೂಪಿಸ ಬಯಸುವ ವಿಶ್ವ ಹಿಂದೂ ಪರಿಷತ್ತಿನ ಕಾರ್ಯದರ್ಶಿಯವರ ವ್ರತವನ್ನು ಸುಬ್ಬಣ್ಣ ಹಾಸ್ಯಾಸ್ಪದವಾಗಿ ಕಂಡಿದ್ದಾರೆ. ಹೀಗೆ ಮುಸ್ಲಿಮರ ಸ್ಥಳಗಳು ಮುಗಿದ ಮೇಲೆ, ಮುಸ್ಲಿಮೇತರರು ಆಕ್ರಮಿಸಿರುವ ಸ್ಥಳಗಳನ್ನು ಹುಡುಕಿ ಬದಲಾಯಿಸಬೇಕಾಗುತ್ತದೆ. ಹೀಗೆ ಚರಿತ್ರೆಯನ್ನು 'ಸರಿಪಡಿಸಲು' ಹೊರಟಾಗ ಮುರಿದುಕೊಳ್ಳುವ ವರ್ತಮಾನದ ಬಗೆಗೆ ಸುಬ್ಬಣ್ಣನವರ ಕಾಳಜಿ ಇದೆ. ಮರುರೂಪಿಸುವ ಈ ಕೆಲಸವೇ ಅಸಂಬದ್ಧ ಎಂದು ನಂಬಿರುವ ಸುಬ್ಬಣ್ಣ ಮುಸ್ಲಿಮರಷ್ಟೇ ಅಲ್ಲ ಜೈನ,

ಬೌದ್ಧ, ಹಿಂದೂಗಳ ಒಳಗೇ ಶೈವ, ವೈಷ್ಣವರ ವಿರೂಪಗೊಂಡ ಸ್ಥಳಗಳಿವೆ. ಅವನ್ನೂ ಪುನಃ ಸ್ಥಾಪಿಸಬೇಕೆ ಎಂದು ಪ್ರಶ್ನಿಸಿಕೊಳ್ಳುತ್ತಾರೆ. ಹಿಂದುಗಳ ಪೂರ್ವಜರೂ ಕೂಡ ಶ್ರೀಲಂಕಾ, ಜಾವ, ಸುಮಾತ್ರ, ಬಾಲಿ, ಇಂಡೋನೇಷ್ಯಾಗಳಲ್ಲಿ ತಮ್ಮ ಧರ್ಮವನ್ನು ಬಲವಂತದಿಂದ ಪ್ರತಿಷ್ಠಾಪಿಸಿದ್ದಾರೆ. ಕರಸೇವೆಯ ನಂತರ ಅಲ್ಲಿ ನೆಲೆಸಿರುವ ದೇವರ ಗೊಂಬೆಗಳನ್ನು ಹಿಂದಕ್ಕೆ ತರುತ್ತಾರೆಯೇ ಎಂದು ಪ್ರಶ್ನೆ ಎತ್ತಿದ್ದಾರೆ.[೮]

ರಾಷ್ಟ್ರ, ಸರ್ಕಾರದ ಕಲ್ಪನೆ ಇಲ್ಲದ ಕಾಲದಲ್ಲಿ ತಮ್ಮ ಶಕ್ತ್ಯಾನುಸಾರ ರಾಜರು ದಂಗೆ ಏಳುವ, ತಮ್ಮ ಧರ್ಮ ಮತ್ತು ನಂಬಿಕೆಗಳನ್ನು ವಿಸ್ತರಿಸುವ ಕಾಲದಲ್ಲಿ ನಡೆದ ಬದಲಾವಣೆಗಳನ್ನು, ಇಂದು ಮೈಮೇಲೆ ಹೇರಿಕೊಂಡು ಕೆರಳುವುದು ಎಷ್ಟು ಅರ್ಥಹೀನವಾದದ್ದು ಎಂದು ಸುಬ್ಬಣ್ಣ ವಿವರಿಸಿದ್ದಾರೆ. ಇಂಡಿಯಾದ ಮೂಲನಿವಾಸಿಗಳ ಮೇಲೆ ದಾಳಿ ಇಟ್ಟ ದ್ರಾವಿಡರು, ಈ ದ್ರಾವಿಡರ ಮೇಲೆ ತಮ್ಮನ್ನು ಏರಿದ ಆರ್ಯರು–ವೈದಿಕರನ್ನು ಉದಾಹರಿಸುತ್ತಾ, ಹೀಗೆ ಪರಸ್ಪರ ಆಕ್ರಮಣದ ಮೂಲಕವೇ ಅನಾಧುನಿಕ ಜಗತ್ತು ರೂಪುಗೊಂಡಿತ್ತೆಂದು ಹೇಳುತ್ತಾರೆ. ಈ ಬಗೆಯ ವಿಕಾಸಕ್ರಮದಲ್ಲಿ ಮುಸ್ಲಿಮರ ದಾಳಿಯೂ ಒಂದು. ಹಾಗೆಯೇ ಭಾರತೀಯರು ಬೇರೊಂದು ಪ್ರದೇಶ, ನೆಲಕ್ಕೆ ದಾಳಿ ಇಟ್ಟು ಅಲ್ಲಿನ ಮೂಲನಿವಾಸಿಗಳನ್ನು ಗುಲಾಮರನ್ನಾಗಿಸಿಕೊಂಡಿರುವ  ಕಥನಗಳಿವೆ. ಬ್ರಿಟನ್ ಸರ್ಕಾರ ಫಿಜಿ ದ್ವೀಪವನ್ನು ತನ್ನ ವಸಾಹತುವನ್ನಾಗಿ ಮಾಡಿಕೊಂಡ ನಂತರ ಅದು ಅಲ್ಲಿ ಹೊಸದಾಗಿ ಕೃಷಿ ಚಟುವಟಿಕೆಗಳನ್ನು ಆರಂಭಿಸಿತು. ನರಭಕ್ಷಣೆಯಲ್ಲಿ ಮುಳುಗಿ ದುಡಿಯದೇ ತಿನ್ನುತ್ತಿದ್ದ ಫಿಜಿ ಮೂಲನಿವಾಸಿಗಳು ಬ್ರಿಟನ್ ಆರಂಭಿಸಿದ ಯಾವ ಕೃಷಿ ಕೆಲಸಕ್ಕೂ ಬಾರದೆಹೋದಾಗ ಬ್ರಿಟಿಷರು ಭಾರತದಿಂದ ಜನರನ್ನು ಕರೆದುಕೊಂಡು ಹೋಗಬೇಕಾಯಿತು. ಹೀಗೆ ಭಾರತದಿಂದ ಹೋದ ಸಿಖ್ಖರು, ದಕ್ಷಿಣದ ಮದ್ರಾಸಿಗಳು, ಅಸ್ಪೃಶ್ಯರು  ಫಿಜಿಯ ಮೂಲನಿವಾಸಿಗಳ ಮೇಲೆ ಆಕ್ರಮಣ ಮಾಡಿ, ಅವರನ್ನು ಎರಡನೇ ದರ್ಜೆಯ ಪ್ರಜೆಗಳನ್ನಾಗಿ ಕಾಣುತ್ತಾ ಶೋಷಿಸತೊಡಗಿದರು ಎಂಬುದನ್ನು ತೇಜಸ್ವಿ ಹೇಳುತ್ತಾರೆ.[೯]

ಭಾರತದಲ್ಲಿ ರಾಮ ಮತ್ತು ಕೃಷ್ಣನಂಥ ಪುರಾಣ ಪ್ರತಿಮೆಗಳು ಪ್ರತಿಯೊಬ್ಬ ಭಾರತೀಯನಲ್ಲೂ ಬೇರೆ ಬೇರೆ ಆವೃತ್ತಿಗಳಲ್ಲಿ ನೆಲಸಿವೆ. ಆದರೆ ಸಂಘಪರಿವಾರಗಳು ರಾಮನಿಗೆ ತೊಡಿಸಿರುವ ಕೇಸರಿಯ ದೆಸೆಯಿಂದ ರಾಮನನ್ನು 'ರಾಮ' ಮಾತ್ರನನ್ನಾಗಿ ಕಾಣುತ್ತಿದ್ದ ಮನಸ್ಸುಗಳು ಅವನಿಂದ ದೂರ ಇರಲು ಪ್ರಯತ್ನಿಸುವಷ್ಟು ಅಸಹ್ಯ ಹುಟ್ಟಿಕೊಂಡಿದೆ. ಕೆ.ವಿ. ಸುಬ್ಬಣ್ಣನವರು ಹೇಳುವಂತೆ 'ಪ್ರಾಯಶಃ ಹಿಂದಿನ ಕಾಲಗಳಲ್ಲಿ ಯಾವತ್ತು ಇಂಡಿಯಾ ರಾಜಕೀಯವಾಗಿ ಏಕ ಘಟಕವಾಗಿರಲಿಲ್ಲ. ಹಾಗಿದ್ದರೂ ರಾಮಕೃಷ್ಣರ ಕಥೆಗಳು ಸಹಸ್ರಾರು ವರ್ಷಗಳ ಪರ್ಯಂತ ಇದನ್ನು ಒಂದು ಅಖಂಡ ನಕಾಶೆಯಾಗಿ ನೆಯ್ದಿದ್ದವು. ಭೌತಿಕೇತರ ಬಂಧಗಳಿಂದ ಒಗ್ಗೂಡಿಸಿದ್ದವು. ರಾಮಾಯಣ ಮಹಾಭಾರತಗಳು ಇಡೀ ಈ ಭೂಖಂಡ ಪರಸ್ಪರ ಮಾತಾಡಿಕೊಳ್ಳಲಿಕ್ಕೆ ಬಳಸಿಕೊಂಡ ಮಾಧ್ಯಮಗಳಾದವು.

ಭಾಷೆಗಳಾದವು. ಜನರು ಶಬ್ದಗಳನ್ನು ಹೆಣೆದು ಹೆಣೆದು ಮಾತಾಡಿಕೊಳ್ಳುವ ಹಾಗೇ ರಾಮಕೃಷ್ಣರ ಕಥೆಗಳನ್ನು ಹೊಸ ಹೊಸ ರೀತಿಯಲ್ಲಿ ಹೆಣೆದು ಹೆಣೆದು ಮಾತಾಡಿಕೊಂಡರು. ನಮ್ಮಲ್ಲಿ ವಿವೇಕವಿದ್ದವರು ಯಾರೂ ಯಾವತ್ತೂ ರಾಮಕೃಷ್ಣರ ಜನ್ಮಸ್ಥಳಗಳನ್ನು ತಪಾಸುಮಾಡಿ ಅಲ್ಲಿ ಕಲ್ಲು ಹಾಕುವ ಪ್ರಯತ್ನ ನಡೆಸಲಿಲ್ಲ. ಬದಲು, ನಮ್ಮ ಲಕ್ಷಾಂತರ ಗ್ರಾಮಗಳ ಗುಡ್ಡ, ಬೆಟ್ಟ, ಕಾಡು ನದಿಬಯಲುಗಳಲ್ಲಿ ಬೀದಿಕೇರಿಗಳಲ್ಲಿ ರಾಮಕೃಷ್ಣರ ಐತಿಹ್ಯಗಳನ್ನು ಬಿತ್ತಿ ಚಿಗುರಿಸಿ ಬೆಳಸಿಟ್ಟರು. ಈ ಐತಿಹ್ಯಗಳು ಹಬ್ಬಿಕೊಳ್ಳುತ್ತಾ ಜನರನ್ನು ಹತ್ತಿರ ತಂದವು. ಪರಸ್ಪರ ಪ್ರೀತಿಯಿಂದ ಹೊಂದಿಕೆಯಿಂದ ಬಾಳಿಕೊಳ್ಳಲು ನೆರವಾದವು. ನಮ್ಮ ಜನಪದವು ವಿವೇಕವಂತವಾಗಿದ್ದಾಗಲೆಲ್ಲ ಇಂಥ ಸಾಧನೆಗಳಾದವು'.[೧೦] ಹೀಗೆ ಎಲ್ಲರನ್ನು ಬೆಸೆದ ರಾಮ ಮತಾಂಧ ನಾಯಕರ ಹಾಗೂ ಮತಿಹೀನ ಜನಸಮುದಾಯದೊಳಗೇ ಬಿರುಕು ತರುವವನಾಗಿ ಬೆಳೆದಿದ್ದಾನೆ. ತ್ರಿಶೂಲ ಹಿಡಿದ ರಕ್ತ ಪಿಪಾಸುಗಳ ನಡುವೆ ಕೆಂಗಣ್ಣು ಬೀರುತ್ತಾ ನಡೆದಿದ್ದಾನೆ.

**೪.೩ ಡಿ.ಆರ್. ನಾಗರಾಜರ ಗ್ರಹಿಕೆಗಳು**

'ಅಧಿಕಾರ ಪಿಪಾಸುಗಳ ಕೈಯಲ್ಲಿ ವಿಜ್ಞಾನ ಎಷ್ಟು ಭಯಾನಕ ಆಯುಧವಾಗಬಲ್ಲದೊ, ಅಷ್ಟೇ ಭಯಾನಕ ಆಯುಧ ಧರ್ಮವೂ ಆಗುತ್ತದೆ'[೧೧] ಎಂದು ನಂಬಿರುವ ಡಿ.ಆರ್. ನಾಗರಾಜ್ ಆಧುನಿಕ ಅಧಿಕಾರಜಗತ್ತು, ರಾಜಕಾರಣಿಗಳು ಮತ್ತು ರಾಜಕೀಯ ಚಿಂತನೆಗಳು ಧರ್ಮವನ್ನು ರಾಜಕಾರಣದ ಆಯುಧವನ್ನಾಗಿ ಮಾರ್ಪಡಿಸಿಕೊಂಡ ಪ್ರಕ್ರಿಯೆಯ ಸ್ವರೂಪವನ್ನು ವಿವರಿಸುತ್ತಾರೆ. ಇವರ ಪ್ರಕಾರ ವೈವಿಧ್ಯಮಯ ಜೀವನ ಕ್ರಮಗಳನ್ನು ರೂಪಿಸಿಕೊಂಡ ವಿಶಾಲ ಭಾರತೀಯ ಜನಸಮುದಾಯದಲ್ಲಿ ಸಂಘಪರಿವಾರ ಮತ್ತದರ ರಾಜಕೀಯ ಚಿಂತನೆಗಳು, ಆ ಸಮುದಾಯಕ್ಕೆ ಒಂದು ಏಕತ್ರವಾದ ಐಡೆಂಟಿಟಿಯನ್ನು ತಂದು ಕೊಡುತ್ತಿವೆ. ಹಿಂದುತ್ವವಾದಿಗಳು 'ಕಲ್ಪಿತ ಕುಲ' ಮತ್ತು 'ಕಲ್ಪಿತ ಮಾತೃಭೂಮಿ'ಯ ಮೂಲಕ ಏಕರೂಪಿ ಹಿಂದೂ ವ್ಯಕ್ತಿತ್ವವನ್ನು ರೂಪಿಸಿರುವ ಬಗೆಯನ್ನು ಡಿ.ಆರ್. ನಾಗರಾಜ್ ತೋರಿಸಿದ್ದಾರೆ. ಇದು ಭಾರತೀಯರ ಜೀವನಕ್ರಮದಲ್ಲಿರುವ ಏಕತೆಯಲ್ಲ; ಎಲ್ಲರೂ ಸಮಾನರು ಎಂದು ಭಾವನಾತ್ಮಕವಾಗಿ ರೂಪುಗೊಂಡಿರುವುದೂ ಅಲ್ಲ. ಪ್ರಬಲ ರಾಜಕೀಯ ಚಿಂತನೆಗಳು ಹೊಮ್ಮಿಸುವ ಮೇಲ್ಪದರದ ಏಕತೆಯಷ್ಟೇ. ಅಧಿಕಾರ ಕೇಂದ್ರಗಳನ್ನು ಹೊರತುಪಡಿಸಿ, ಮರಳಿ ಭಾರತದ ಸಹಜ ಜೀವನಕ್ರಮದ ನೆಲೆಗೆ ಹಿಂದಿರುಗಿದರೆ ಅಖಂಡ ಹಿಂದೂ ಶಕ್ತಿ ಎನ್ನುವ ಕಲ್ಪಿತ ಕುಲವನ್ನು ಹಿಂದುತ್ವವಾದಿಗಳೇ ಚೂರು ಚೂರಾಗಿ ಕಾಣುತ್ತಾರೆ.

ಎಲ್ಲ ಕೋಮುವಾದಿ ಚಿಂತನೆಗಳು ಜನಾಂಗ ಮತ್ತು ರಾಷ್ಟ್ರದ ಬಗೆಗೆ ಶ್ರೇಷ್ಠ ಎನ್ನುವ ಮಾದರಿಗಳನ್ನು ನಿರ್ಮಿಸುತ್ತವೆ. ಹಿಂದುತ್ವವಾದಿಗಳು ಕೂಡ ಧರ್ಮ, ದೇವರು, ನೆಲದ ಬಗೆಗೆ ಏಕಮಾತ್ರ ಶ್ರೇಷ್ಠ ಮಾದರಿಗಳನ್ನು ರೂಪಿಸಿದ್ದಾರೆ, ನಂಬಿಸಿದ್ದಾರೆ. ದೇವರು

ಧರ್ಮದ ಬಗೆಗಿನ ಇಂಥ ಅಖಿಲಭಾರತೀಯ ಹುಸಿಕಲ್ಪನೆಗಳನ್ನು ಧಿಕ್ಕರಿಸಿ ನಿಲ್ಲಬಲ್ಲ ನಿಜ ಪ್ರತಿಮೆಗಳನ್ನು ನಮ್ಮ ದೇಸೀ ಪರಂಪರೆಗಳು ರೂಪಿಸಿವೆ. ಹಿಂದುತ್ವವಾದಿಗಳು ಉಗ್ಗಡಿಸುತ್ತಿರುವ ಅವರ ಚಾರಿತ್ರಿಕ ವಿಸ್ಮೃತಿಯಲ್ಲಿ ರೂಪಗೊಂಡ ಹಿಂದೂ ಎಂಬ 'ಕಲ್ಪಿತ ಕುಲ'ವನ್ನು ಡಿ.ಆರ್. ನಾಗರಾಜ್ ಕನ್ನಡ ಪರಂಪರೆಯಲ್ಲಿ ಒಂದು ಆದರ್ಶ ಮಾದರಿ ಎಂಬಂತೆ ರೂಪುಗೊಂಡಿರುವ ವಚನ ಸಂಸ್ಕೃತಿಯ ಮೂಲಕ ಒಡೆಯುತ್ತಾರೆ. ವಚನಯುಗದ ಚಿಂತನೆ ಹಾಗೂ ಅದ್ವೈತದ ಚಿಂತನೆಗಳ ಎದುರು ಏಕತ್ರವಾದ ಕಲ್ಪಿತ ಕುಲಗಳು ಎಷ್ಟು ಅಳ್ಳಕ ಎಂಬುದನ್ನು ವಿವರಿಸುತ್ತಾರೆ.

ಹಿಂದೂ ಮತೀಯವಾದಿಗಳು ಹೇಳುವಂತೆ ರಾಮ ಅಯೋಧ್ಯೆಯಲ್ಲಿಯೇ ಹುಟ್ಟಿದ್ದಾನೆ ಎಂದುಕೊಂಡರೂ, ಅವರು ಮಸೀದಿ ಇರುವ ಜಾಗದಲ್ಲೇ ಮಂದಿರವನ್ನು ನಿರ್ಮಿಸಿದರೂ, ಅದೊಂದು ಸ್ಥಾವರ ರೂಪಿಯಾದ ದೇವಸ್ಥಾನವಾದೀತು ಅಷ್ಟೆ. ರಾಮನನ್ನು ಸ್ಥಾವರದಲ್ಲಿ ಬಂಧಿಸ ಬಯಸುವ ಹಿಂದೂ ಮೂಲಭೂತವಾದಿಗಳಿಗೆ ವಚನಯುಗದ ಬಸವಣ್ಣ ಹೇಳುವ 'ಉಳ್ಳವರು ಶಿವಾಲಯವ ಮಾಡುವರು' ಎಂಬ ವಚನವನ್ನು ಹಾಗೂ ದೇವರು, ದೇವಾಲಯದ ಬಗೆಗೆ ಬಸವಣ್ಣನ ವಿಶಿಷ್ಟ ಕಲ್ಪನೆಯನ್ನು ಎದುರಿಗಿಟ್ಟು ಡಿ.ಆರ್.ಎನ್ ಹಿಂದುತ್ವವಾದಿಗಳ ನಿಲುವನ್ನೇ ಬುಡಮೇಲಾಗಿಸುತ್ತಾರೆ.[೧೨] ಸಂಖ್ಯಾ ಬಲಕ್ಕಾಗಿ ಹಿಂದುತ್ವವಾದಿಗಳು ತಮ್ಮ ಹಿಂದೂ ಎಂಬ ಕಲ್ಪಿತ ಕುಲದೊಳಕ್ಕೆ ವೀರಶೈವರನ್ನು ಸೇರಿಸಿಕೊಂಡರೂ, ಅದೇ ವೀರಶೈವ ಸಂಸ್ಕೃತಿ ನಂಬಿದ ಜಂಗಮರೂಪಿ ತತ್ವವನ್ನು ಮರೆಯುತ್ತಾರೆ. ಪವಿತ್ರ ಇಟ್ಟಿಗೆಗಳಲ್ಲಿ ರಾಮನನ್ನು ಕಾಣಲು ಹಾತೊರೆವ ಇವರಿಗೆ, ದೇಹವನ್ನೇ ದೇಗುಲವನ್ನಾಗಿ ಮಾಡಿಕೊಂಡು, ನಡೆದಾಡುವ ಮನುಷ್ಯನೇ ಧರ್ಮದ, ಪ್ರಾಣದ ಮೂಲ ಎಂದು ನಂಬಿದ ಬಸವಣ್ಣನವರ ಉದಾರವಾದಿ ಮಾನವೀಯ ಚಿಂತನೆಗಳ್ಯಾವೂ ಮತೀಯವಾದಿಗಳಿಗೆ ಬೇಕಾಗಿಲ್ಲ.

ರಾಜಕಾರಣವನ್ನೇ ಕೇಂದ್ರ ಮಾಡಿಕೊಂಡ ಹಿಂದುತ್ವವಾದ ಸಂಸ್ಕೃತಿಯಲ್ಲಿ ತನಗೆ ನೆರವಾಗಬಲ್ಲ ಮೇಲ್ಪದರದ ಅಂಶಗಳನಷ್ಟೇ ಆಯ್ದುಕೊಂಡು, ಮನುಷ್ಯನನ್ನು ನಿಜವಾಗಿ ವಿಕಾಸದೆಡೆಗೆ ನಡೆಸುವ ಅದೇ ಸಂಸ್ಕೃತಿಯ ಒಳಗಿನ ಮಾನವೀಯ ಚಿಂತನೆಗಳನ್ನು ಮರೆತುಬಿಡುತ್ತದೆ. ತಾನು ನಂಬಿದ್ದನ್ನೇ ಶ್ರೇಷ್ಠ ಅಂದುಕೊಳ್ಳುತ್ತಾ, ಜನತೆಯಲ್ಲೂ ಆ ನಂಬಿಕೆಯನ್ನು ಸೃಷ್ಟಿಸಿ, ಅದಕ್ಕಾಗಿ ಸಾಯುವಂತೆ ಪ್ರೇರೇಪಿಸುತ್ತದೆ. ಇಲ್ಲಿ ಡಿ.ಆರ್.ಎನ್. ನೆನಪಿಸುವ 'ಒಂದು ಕಾರಣಕ್ಕಾಗಿ ಸಾಯಲು ಸಿದ್ಧರಿರುವವರು, ಸಾಯಿಸಲೂ ಕೂಡ ಸಿದ್ಧ' ಎಂಬ ಆರ್ವೆಲ್ ಮಾತು ಮುಖ್ಯ ಅನಿಸುತ್ತದೆ.[೧೩]

ರಾಮನ ಹೆಸರಿನಲ್ಲಿ ನಡೆಯುತ್ತಿರುವ ಎಲ್ಲ ಗದ್ದಲಗಳು ಜನಪದರ ಜೀವನ ಕ್ರಮದಲ್ಲಿ ಎಷ್ಟು ಜೀವ ಇಲ್ಲದ್ದು ಎಂಬುದನ್ನು ಡಿ.ಆರ್.ಎನ್. ಕಾಣಿಸಿದ್ದಾರೆ. ಜನಪದರಿಗೆ ಹರಿವ

ನೀರೆಲ್ಲ ಗಂಗೆ. ಅದಕ್ಕವರು ಉತ್ತರದ ಗಂಗಾನದಿಗೆ ಹೋಗುವ ಅಗತ್ಯವೇ ಇಲ್ಲ. ಗಂಗಾ ಮೂಲಕ್ಕೆ ಹೋಗಿ ಪೂಜೆ ಮಾಡಬೇಕೆನ್ನುವ ತಮ್ಮ ತಾಯಿಯ ಚಡಪಡಿಕೆಗೆ, ಗಂಗಾನದಿ ಹಿಮಾಲಯದಲ್ಲಿದೆಯಲ್ಲ ಎಂದು ಚಿಂತಿತರಾಗಿದ್ದ ಡಿ.ಆರ್.ಎನ್. ಕೊನೆಗೆ ಗೌರಿಬಿದನೂರಿನ ಹತ್ತಿರದ ಒಂದು ಸಣ್ಣ ಹಳ್ಳದಲ್ಲಿ ಗಂಗೆಯನ್ನು ಕಂಡುಕೊಂಡ ತಮ್ಮ ತಾಯಿಯ ನಂಬಿಕೆಗೆ ವಿಸ್ಮಿತರಾಗಿದ್ದಾರೆ. ಆ ಮೂಲಕವೇ ಒಂದು ಜನಸಂಸ್ಕೃತಿ ತನಗೆ ದಕ್ಕಬಹುದಾದ ಅಂತರದಲ್ಲೇ ದೇವರು, ಧರ್ಮ, ಪುರಾಣಗಳ ಬಗೆಗೆ ರೂಪಿಸಿಕೊಂಡಿರುವ ನಂಬಿಕೆ, ಐತಿಹ್ಯಗಳನ್ನು ಸಾಂಸ್ಕೃತಿಕ ನೋಟದಲ್ಲಿ ಕಾಣಲೆತ್ನಿಸಿದ್ದಾರೆ. ನಮ್ಮ ಬದುಕು ರಹಸ್ಯಾತ್ಮಕವಾಗುವುದು, ಪವಿತ್ರವಾಗುವುದು, ಪುರಾಣೀಕರಣಗೊಳ್ಳುವುದು ಇಲ್ಲಿಯೇ ಎಂದು ನಂಬಿದ್ದಾರೆ. ಅದಕ್ಕಾಗಿ ಡಿ.ಆರ್.ಎನ್. ಪ್ರಕಾರ ರಾಮ ಸೀತೆಯರು ಭಾರತದ ಎಲ್ಲ ಹಳ್ಳಿಗಳ ಇಪ್ಪತ್ತು ಮೈಲಿ ಫಾಸಲೆಯಲ್ಲಿ ಹುಟ್ಟಿದ್ದಾರೆ, ಓಡಾಡಿದ್ದಾರೆ. ಪ್ರತಿಯೊಂದು ಹಳ್ಳಿಯ ಬೆಟ್ಟ, ನದಿ, ಹಳ್ಳ, ಸರೋವರ, ಕಲ್ಲುಬಂಡೆಗೂ, ರಾಮನಿಗೂ ಸೀತೆಗೂ ಸಂಬಂಧ ಇದ್ದೇ ಇರುತ್ತದೆ. ಕೆ.ವಿ. ಸುಬ್ಬಣ್ಣ ಜನಪದರ ವಿವೇಕವಂತ ಸಾಧನೆ ಎನ್ನುವ ಈ ಬಗೆಯ ಜನಪದ ಬದುಕಿನ ಚಿಂತನೆಯನ್ನು ಡಿ.ಆರ್.ಎನ್. ಹೀಗೆ ಗ್ರಹಿಸಿದ್ದಾರೆ:

> 'ನೆರೆಯ ಹಳ್ಳಿಗಳಲ್ಲಿ ಕಣ್ಣಿಗೆ ಕಾಣುವ ಬೆಟ್ಟಗಳಲ್ಲಿ ರಾಮಕೃಷ್ಣರು ಕಾಣದಿದ್ದರೆ ಆ ಜನಗಳ ಆತ್ಮವೇ ಮಾಯವಾದಂತೆ. ಅಯೋಧ್ಯೆಯಲ್ಲೇ ರಾಮ ಹುಟ್ಟಿದ ಎಂದು ನಿರ್ದಿಷ್ಟಗೊಳಿಸುವುದು ಈ ದೃಷ್ಟಿಯಿಂದ ಹಾಸ್ಯಾಸ್ಪದವೇ ಸರಿ. ಅದರಲ್ಲೂ ರಾಮ-ಕೃಷ್ಣ ಪಾಶ್ಚಿಮಾತ್ಯ ಅರ್ಥದಲ್ಲಿ ಚಾರಿತ್ರಿಕ ನಿರ್ದಿಷ್ಟತೆ ಇರುವ ವ್ಯಕ್ತಿಗಳಲ್ಲ. ಅನೇಕ ತಲೆಮಾರುಗಳ ಪೌರಾಣಿಕ ಪ್ರತಿಭೆ ಒಂದೊಂದಾಗಿ ಸೇರುತ್ತಾ ಬಂದ ಒಂದು ವಿರಾಟ್ ಕಲ್ಪನೆಯ ಗೂಡುಗಳು ಅವು'.[೧೪]

ಅಯೋಧ್ಯೆಯಲ್ಲೇ ರಾಮನನ್ನು ಅಥವಾ ರಾಮನಲ್ಲೇ ಇಡೀ ಮಾನವ ಕುಲವನ್ನು ಕಾಣಬಯಸುವ ಹಿಂದೂ ಮತಾಂಧರು, ಮೂಲಭೂತವಾದಿ ಚಿಂತನೆಗಳನ್ನು ಅಫೀಮಿನಂತೆ ಸೇವಿಸುತ್ತಿರುವ ಮುಸ್ಲಿಂ ಮತಾಂಧರುಗಳೆಲ್ಲ ಬೌದ್ಧ ಮತ್ತು ಝೆನ್ ಚಿಂತನೆಗಳ ನೆಲೆಯಲ್ಲಿ ಎಷ್ಟು ಮೂರ್ಖರು ಎಂಬುದನ್ನು ಹಾಗೂ ದೇವರು, ಧರ್ಮವನ್ನು ಕುರಿತಾದ ಮತಾಂಧರ ಭಕ್ತಿ ಎಷ್ಟು ಪೊಳ್ಳು ಎಂಬುದನ್ನು ಡಿ.ಆರ್.ಎನ್. ತೋರಿಸುತ್ತಾರೆ. ಬುದ್ಧನ ಸ್ವರೂಪವನ್ನು ಕೇಳಲು ಬಂದ ಶಿಷ್ಯನೊಬ್ಬನ ಎದುರಿಗೆ ಗುರು, ಚಳಿ ತಡೆಯಲಾರದೆ ಬುದ್ಧನ ಮರದ ಪ್ರತಿಮೆಯೊಂದನ್ನು ಬೆಂಕಿಗೆ ಹಾಕಿ ಮೈ ಕಾಯಿಸಿಕೊಳ್ಳುವ ಕಥೆಯನ್ನು ಉದಾಹರಿಸುತ್ತಾರೆ.[೧೫] ರಾಮನಿಂದ, ಅಲ್ಲಾಹುವಿನಿಂದ ದೀಕ್ಷೆಪಡೆದವರಂತೆ ವರ್ತಿಸುತ್ತಿರುವ ಮತೀಯವಾದಿಗಳು ಈ ಕಥೆಯಿಂದ ಕಲಿಯಬೇಕಾದದ್ದು ಸಾಕಷ್ಟಿದೆ.

## ೪.೪ ಯು.ಆರ್. ಅನಂತಮೂರ್ತಿಯವರ ಗ್ರಹಿಕೆಗಳು

ಭಾರತ ಬಹುಮುಖಿ ಸಂಸ್ಕೃತಿಯ ನಾಡಾದರೂ ಬ್ರಿಟನ್ನಿನ ಆಡಳಿತವನ್ನು ವಿರೋಧಿಸಿದ ಸಂದರ್ಭದಲ್ಲಿ, ಒಂದು ಐಕ್ಯರೂಪಿ ಶಕ್ತಿಯಾಗಿ ಎದುರಾಗಿದೆ. ಹೀಗೆ ವಸಾಹತುಘಟ್ಟದಲ್ಲಿ ಏಕಘನಾಕೃತಿಯ ಚಹರೆಯನ್ನು ಪಡೆದುಕೊಂಡಿದ್ದ ಭಾರತ,(ವಸಾಹತುಕಾರನನ್ನು ವಿರೋಧಿಸುವ ನೆಲೆಯಲ್ಲಿ ಮಾತ್ರ), ಆ ನಂತರವೂ ಅದೇ ಚಹರೆಯನ್ನು ನಿರ್ಮಿಸಲೆತ್ನಿಸಿದ ಮೂಲಭೂತವಾದಿಗಳ ಕಾರಣಕ್ಕಾಗಿ ಮತೀಯವಾದದ ರೋಗಕ್ಕೆ ಸಿಲುಕಿದೆ. 'ನಾವು ಐರೋಪ್ಯರಂತೆ ಒಂದು ನೇಷನ್ ಸ್ಟೇಟ್ ಆಗಿರದಿದ್ದರೂ ಕೂಡ, ಐರೋಪ್ಯ ದೇಶದ ಒಂದು ನೇಷನ್ ಸ್ಟೇಟ್ ಆಗಬಹುದಾದ ಕಲ್ಪನೆಯಿಂದಲೇ ಬ್ರಿಟನ್ನನ್ನು ಎದುರಿಸಬೇಕಾಗಿ ಬಂತು' ಎನ್ನುತ್ತಾರೆ ಅನಂತಮೂರ್ತಿ.[೧೬] ಹೀಗೆ ನೇಷನ್ ಸ್ಟೇಟ್ ಆಗಬೇಕಾದ, ವಸಾಹತುಘಟ್ಟ ನಿರ್ಮಿಸುವ ವಿಶಿಷ್ಟ ಒತ್ತಡದ ಸಂದರ್ಭದಲ್ಲಿ ನಾವು ಯಾರು ಎಂಬ ಹುಡುಕಾಟ ಪ್ರಾರಂಭವಾಗುತ್ತದೆ. ಇಂಥ ಘಳಿಗೆಗಳಲ್ಲಿ ಸಾಂಸ್ಕೃತಿಕವಾಗಿ ವೈವಿಧ್ಯಮಯವಾಗಿದ್ದ ಭಾರತದಲ್ಲಿ ರಾಜರಾಂ ಮೋಹನರಾಯರ ಪರಂಪರೆಯನ್ನು ವಿರೋಧಿಸುತ್ತಾ ಆಧುನಿಕವಾಗುವ ನಿಲುವುಗಳು ಹಾಗೂ ಬಂಕಿಮಚಂದ್ರರ ಆದರ್ಶ ಕೃಷ್ಣ, ತಿಲಕರ ಶಿವಾಜಿ ಮತ್ತು ಗಣೇಶನ ದೈವೀ ಮಾದರಿಗಳು ಒಟ್ಟಿಗೇ ರೂಪುಗೊಂಡವೆಂಬುದು ಅನಂತಮೂರ್ತಿಯವರ ನೋಟ.

ತನ್ನ ಸ್ವರೂಪವನ್ನೇ ಭಾರತದಲ್ಲೂ ನಿರ್ಮಿಸಲಾರಂಭಿಸಿದ್ದ ಬ್ರಿಟನ್ನಿನ 'ಒತ್ತಾಯದಿಂದಾಗಿ ಪ್ರಾರಂಭವಾದ ಹುಡುಕಾಟದಲ್ಲಿ ಒಂದು ಕಡೆ ನಾವು ಉದ್ದೇಶಪೂರ್ವಕವಾಗಿ ಹಿಂದೂ ಮತಸ್ಥರಾಗಲು ಹವಣಿಸಿದರೆ, ಇನ್ನೊಂದು ಕಡೆಯಲ್ಲಿ ಇಂಗ್ಲಿಷ್ ಜನರ ನಡೆ ನಡೆನುಡಿಯನ್ನು ನಮ್ಮದಾಗಿಸಿಕೊಳ್ಳಲು ಹವಣಿಸಿದೆವು. ಹೀಗೆ ಇವತ್ತಿಗೂ ನಮ್ಮ ಸ್ವಕೀಯತೆಯ ಹುಡುಕಾಟದಲ್ಲಿ, ಒಂದೋ ನಾವು ಅಪ್ಪಟ ಹಿಂದೂಗಳಾಗಲು ಪ್ರಯತ್ನಿಸುತ್ತೇವೆ: ಅಥವಾ ಆಧುನೀಕರಣದಲ್ಲಿ ಐರೋಪ್ಯರಂತಾಗಲು ಬಯಸುತ್ತೇವೆ' ಎನ್ನುತ್ತಾರೆ ಅನಂತಮೂರ್ತಿಯವರು.[೧೭] ನಾವು ಐರೋಪ್ಯರಂತೆ ಆಗದಿರಲು ನಾವು ಅಪ್ಪಟ ಹಿಂದೂಗಳಾಗಬೇಕೆ? ಅಪ್ಪಟ ಹಿಂದೂಗಳೂ ಆಗದೆ, ಐರೋಪ್ಯರನ್ನೂ ಅನುಸರಿಸದೇ ವಸಾಹತುಪೂರ್ವದಲ್ಲಿದ್ದ ಬಹುಸಾಂಸ್ಕೃತಿಕ ನೆಲೆಗಳನ್ನು ಪನರ್ ಕಟ್ಟಿಕೊಳ್ಳಲಾಗದೆ? ಸಾಧ್ಯವಿದೆ. ಅದಕ್ಕಾಗಿ ನಾವು ಏಕತ್ರವಾದ ಮಾದರಿಗಳನ್ನು ರೂಪಿಸಲೆತ್ನಿಸುತ್ತಾ, ಅಧಿಕಾರ ರಾಜಕಾರಣ ಮತ್ತು ಸಾಂಸ್ಕೃತಿಕ ರಾಜಕಾರಣ ನಡೆಸುತ್ತಿರುವ ಮೂಲಭೂತವಾದ ಮತ್ತು ಮತೀಯವಾದವನ್ನು ಹಿಮ್ಮೆಟ್ಟಿಸಬೇಕಾಗಿದೆ. ವಸಾಹತು ಸನ್ನಿವೇಶದಲ್ಲಿ ತಿಲಕರಂಥವರು ನಿರ್ಮಿಸಿದ ಏಕರೂಪಿ ದೈವೀ ಮಾದರಿಗಳ ಒಡಲಿನಲ್ಲಿಯೇ ಧಾರ್ಮಿಕ ಮೂಲಭೂತವಾದಿ ಚಿಂತನೆಗಳು ಬೆಳೆಯಲಾರಂಭಿಸಿದ್ದವು. ತಿಲಕರಿಗೆ ಗಣೇಶನೇ ಅಂತಿಮ. ಇಂದು ರಾಮನೇ ಪರಮ ಸತ್ಯ ಅಂದುಕೊಂಡಿರುವ ಹಿಂದೂ ಮತೀಯವಾದಿಗಳು ತಿಲಕರನ್ನು ಹಾದು ಬಂದವರೇ. ಗಾಂಧಿ ರಾಮನನ್ನು ಕಂಡದ್ದಕ್ಕೂ, ಮತೀಯವಾದಿಗಳ ರಾಮನಿಗೂ ಅಂತರವಿದೆ ಎಂಬುದನ್ನು ಈಗಾಗಲೇ ಹೇಳಿದ್ದೇನೆ. ಹೀಗೆ ದೇವರ ಬಗೆಗಿನ ಗಾಂಧಿಯ ತಿಳುವಳಿಕೆಯನ್ನು

ಅನಂತಮೂರ್ತಿಯವರು ಗ್ರಹಿಸಿರುವುದು ಹೀಗೆ: "ಮೊದಲು ಗಾಂಧೀಜಿಯವರು 'ದೇವರು ಸತ್ಯ' ಎಂದು ತಿಳಿದಿದ್ದವರು ಎಲ್ಲ ಸಾಂಪ್ರದಾಯಿಕರಂತೆ. ಆಮೇಲೆ ಅವರು ಬದಲಿಸಿಕೊಂಡ ಧೋರಣೆ ಎಂದರೆ ಇದು: ಸತ್ಯವೇ ದೇವರು. 'ದೇವರೇ ಸತ್ಯ' ಮತ್ತು 'ಸತ್ಯವೇ ದೇವರು' ಎನ್ನುವುದರ ನಡುವಿನ ಅಂತರ ಅತ್ಯಂತ ಮಹತ್ವವಾದದ್ದು. ಸಂಕೋಚದ ಮತೀಯತೆಗೂ ಧಾರಾಳದ ಆಧ್ಯಾತ್ಮಿಕತೆಗೂ ನಡುವೆ ಇರುವ ಅಂತರ ಇದು. ದೇವರೇ ಸತ್ಯ ಎನ್ನುವವನು ತಾನು ಅನುಸರಿಸುವ ಮತದಲ್ಲಿ ವರ್ಣಿತವಾದ ದೇವರು ಮಾತ್ರ ಸತ್ಯ ಎಂದು ತಿಳಿಯುವುದು ಬಹಳ ಸಹಜವಾದುದು. ತನ್ನ ದೇವರು ಮಾತ್ರ ಸತ್ಯ ಎಂದು ತಿಳಿದ ನಂತರ ಉಳಿದ ಎಲ್ಲ ದೇವರುಗಳೂ ಸುಳ್ಳು ಎನ್ನುವುದು ತರ್ಕಬದ್ಧವಾದ ಮುಂದಿನ ಹೆಜ್ಜೆಯಾಗುತ್ತದೆ. ಇದು 'ಮೂಲಭೂತವಾದ'ಕ್ಕೆ ಎಡೆಮಾಡಿಕೊಡುತ್ತದೆ".[೧೮] ಮತೀಯವಾದಿಗಳು ದೇವರೇ ಸತ್ಯ ಅಂದುಕೊಂಡವರು. ತಾವು ನಂಬಿದ ದೇವರೇ ಅಂತಿಮ. ತಾವು ಅವನಲ್ಲೇ ಸರ್ವಸ್ವವನ್ನು ಕಾಣುತ್ತಿರುವುದಾಗಿಯೂ, ಇಡೀ ಸಮೂಹವೂ ಕಾಣಬೇಕೆಂತಲೂ ಒತ್ತಾಯಪೂರ್ವಕವಾಗಿ ಹೇರಲೆತ್ನಿಸುವವರು. ಇವರು ದೇವರನ್ನು ಒಂದು ದೊಡ್ಡ ಶುಷ್ಕ ಸಂಕೇತವನ್ನಾಗಿ ಮಾಡಿಬಿಟ್ಟಿರುತ್ತಾರೆ. ಅದಕ್ಕಾಗಿಯೇ ಶ್ರೇಷ್ಠ ಸಮಾಜವಾದಿ ಚಿಂತಕ ಲೋಹಿಯಾ ಮೆಚ್ಚಿಕೊಂಡಿದ್ದ ರಾಮ, ಈ ಹೊತ್ತು ಮತೀಯಭಾವನೆಗಳನ್ನು ಎಚ್ಚರಿಸುವವ ಮಾತ್ರ. ಅನಂತಮೂರ್ತಿಯವರು ಹೇಳುವಂತೆ 'ಸತ್ಯವೇ ದೇವರು ಎಂದು ತಿಳಿಯುವ ಮನಸ್ಸು ಮತೀಯತೆಯನ್ನು ಆಧಾತ್ಮಿಕತೆಯಾಗಿ ಪರಿವರ್ತಿಸುತ್ತದೆ. ಪಂಥಗಳ ಕಲ್ಮಶಗಳನ್ನು ಕಳೆದುಕೊಂಡು ಪಥದ ಅನ್ವೇಷಣೆಯಲ್ಲಿ ತೊಡಗುತ್ತದೆ'.[೧೯]

ಮತೀಯವಾದಿಗಳು ತಮ್ಮ ರಾಜಕೀಯವನ್ನು ಬಲಪಡಿಸಿಕೊಳ್ಳಲು ದೇವರು, ಧರ್ಮವನ್ನು ಸುಲಭವಾಗಿ ಬಳಸಿಕೊಳ್ಳುತ್ತಾ, ಇವುಗಳ ಬಗೆಗಿನ ಜನರ ಭಕ್ತಿ ಮತ್ತು ಪ್ರೀತಿಯನ್ನು ಮತಗಳನ್ನಾಗಿ ಪರಿವರ್ತಿಸುತ್ತಿದ್ದಾರೆ. ರಾಮ, ಅಯೋಧ್ಯೆ, ಹಿಂದುತ್ವವಾದ ಪ್ರಬಲ ರಾಜಕೀಯ ಅಸ್ತ್ರವಾದದ್ದು ಹೀಗೆಯೆ. ಸುಬ್ಬಣ್ಣ, ಲಂಕೇಶ್, ಡಿ.ಆರ್.ಎನ್ ಮೊದಲಾದವರು ನಂಬಿರುವಂತೆ, ಅನಂತಮೂರ್ತಿಯವರೂ ರಾಮ ಅಯೋಧ್ಯೆಯಲ್ಲೇ ಹುಟ್ಟಿದ ಎಂಬುದನ್ನು ನಿರಾಕರಿಸುತ್ತಾ ಇಂಡಿಯಾದ ಪ್ರತೀ ಹಳ್ಳಿಯಲ್ಲೂ ಅವನು ಜನಿಸಿದ್ದಾನೆ ಎಂದು ನಂಬಿದ್ದಾರೆ. ತಾವು ಕೇರಳದಲ್ಲಿದ್ದಾಗ, ರಾಮ ಜನ್ಮಭೂಮಿಯ ವಿವಾದವೆದ್ದ ಸಂದರ್ಭದಲ್ಲಿ ಅಂದಿನ ಕೇರಳದ ಮುಖ್ಯಮಂತ್ರಿ ನಾಯನಾರ್ ಹೇಳಿದ 'ಅರರೇ ರಾಮ ಹುಟ್ಟಿದ್ದು ಕೇರಳದಲ್ಲಿ ಅಂತ ತಿಳಿದಿದ್ದೆ' ಎಂಬ ಮಾತನ್ನು ನೆನಪಿಸಿಕೊಳ್ಳುತ್ತಾ 'ಯಾರು ಯಾರು ರಾಮ ಹುಟ್ಟಿದ್ದು ನಮ್ಮೂರಲ್ಲಿ ಎಂದು ತಿಳಿಯುತ್ತಾರೋ ಅವರು ರಾಮನನ್ನು ನಿಜವಾಗಿಯೂ ಪಡೆದವರು' ಎನ್ನುತ್ತಾರೆ ಅನಂತಮೂರ್ತಿ.[೨೦]

ದೇವರು, ಧರ್ಮ, ರಾಷ್ಟ್ರ, ಭಾಷೆಗಳ ಬಗೆಗೆ ಮತೀಯವಾದಿಗಳಿಗಿರುವ ನಿಷ್ಠೆ, ಪ್ರೀತಿ ಹಾಗೂ ವಿಧೇಯತೆ ಹುಸಿಯಾದದ್ದು. ಈ ಎಲ್ಲ ಹುಸಿನಿಷ್ಠೆಗಳು ಅನ್ಯಮತೀಯರ ಬಗೆಗೆ ಸ್ವಮತೀಯರಿಂದ ದ್ವೇಷವನ್ನು ಹೊಮ್ಮಿಸಲು ಮತ್ತು ಸ್ವಮತೀಯರ ಮತಗಳನ್ನು

ಕೇಂದ್ರೀಕರಿಸಲು ಮಾತ್ರ ಮೀಸಲು. ಮುಸ್ಲಿಮರಿಗೆ ಪಾಕಿಸ್ತಾನವೆಂಬ ಪ್ರತ್ಯೇಕ ರಾಷ್ಟವನ್ನು ನಿರ್ಮಿಸಲೇಬೇಕೆಂದು ವಾದಿಸಿದ ಜಿನ್ನಾಗೆ ಪಾಕಿಸ್ತಾನ ಎಂಬ ರಾಷ್ಟ್ರ ಮತ್ತು ಇಸ್ಲಾಂ ಎಂಬ ಧರ್ಮ ಎರಡೂ ಅಧಿಕಾರ ಕೇಂದ್ರಗಳೇ. ಅದಕ್ಕಾಗಿಯೇ ಅನಂತಮೂರ್ತಿಯವರು 'ನಾನು ಮುಸ್ಲಿಮರ ಸ್ನೇಹಿತ, ಆದರೆ ಪಾಕಿಸ್ತಾನದ ವಿರೋಧಿ' ಎಂಬ ಲೋಹಿಯಾ ಅವರ ಮಾತನ್ನು ಅನುಮೋದಿಸುತ್ತಾ 'ಪಾಕಿಸ್ತಾನದ ಸೃಷ್ಟಿಯ ಹಿಂದಿದ್ದ ಸಿದ್ಧಾಂತ ಮತ್ತು ಆರ್.ಎಸ್.ಎಸ್ ಪ್ರತಿಪಾದಿಸುತ್ತಿದ್ದ ಸಿದ್ಧಾಂತಗಳೆರಡೂ ಮತವನ್ನು ಆಧಾರವನ್ನಾಗಿಟ್ಟುಕೊಂಡಿದ್ದವು. ಆದ್ದರಿಂದ ಇವೆರಡೂ ಒಂದೇ ಎಂದು ಲೋಹಿಯಾ ಭಾವಿಸಿದ್ದರು' ಎನ್ನುತ್ತಾರೆ.[೨೧]

ತಾವೇ ಭ್ರಷ್ಟರಾಗಿ ದೇಶವನ್ನು ನುಂಗುತ್ತಿರುವ ಹುಸಿ ದೇಶಪ್ರೇಮಿಗಳಿಗೆ, ಕಾಂಗ್ರೆಸ್ ನಾಯಕಿ ಸೋನಿಯಾ ಗಾಂಧಿ ಪರದೇಶಿ ಎಂಬುದೇ ಬಹುದೊಡ್ಡ ಅಸ್ತ್ರವಾಗಿದೆ. ಅದಕ್ಕಾಗಿಯೇ ಅವರು ಸೋನಿಯಾ ಪರದೇಶಿ ಎಂಬುದನ್ನು ಮತ್ತೆ ಮತ್ತೆ ನೆನಪಿಸುತ್ತಾರೆ. ಹೀಗೆ ನೆನಪಿಸುವವರ ಸ್ವದೇಶನಿಷ್ಠೆ ಎಷ್ಟು ಪೊಳ್ಳು ಹಾಗೂ ಅವರೆಷ್ಟರ ಮಟ್ಟಿಗೆ ಭಾರತಿಯರು ಮಾತ್ರವೇ ಆಗಿದ್ದಾರೆ ಎಂಬುದರ ಬಗೆಗೆ ಅನಂತಮೂರ್ತಿಯವರ ಒಳನೋಟ ಹೀಗಿದೆ: 'ಒಬ್ಬ ಫಾರಿನರ್ ಎನ್ನುವುದು ಇಶ್ಯೂ ಆಗಬಾರದು. ಏಕೆಂದರೆ ನಾನು ಎಲ್ಲೋ ಒಂದು ಕಡೆ ತಮಾಷೆಗೆ ಹೇಳಿದೆ– ಈಗ ಉದಾಹರಣೆಗೆ ಸೋನಿಯಾ ಗಾಂಧಿಯವರನ್ನೇ ತೆಗೆದುಕೊಳ್ಳೋಣ. ಅವರು ಹುಟ್ಟಿದ್ದು ಇಟಲಿಯೇ ಆದರೂ, ತಾನು ಹುಟ್ಟಿದ್ದು ಅಲಹಾಬಾದ್‌ನಲ್ಲಿ ಎನ್ನುವಂತೆ ವರ್ತಿಸುತ್ತಾರೆ. ಹಿಂದಿ ಭಾಷೆಯನ್ನೂ ಕಲಿತುಕೊಂಡಿದ್ದಾರೆ. ಆದರೆ ನಮ್ಮ ಬೆಂಗಳೂರಿನಲ್ಲಿ ಹುಟ್ಟಿದವರು ಇಂಡಿಯಾ ಶೈನಿಂಗ್ ಎಂಬ ಈ ಕಾಲದಲ್ಲಿ ನಾವು ಹುಟ್ಟಿದ್ದು ನ್ಯೂಯಾರ್ಕ್‌ನಲ್ಲಿ ಎಂದು ತಿಳಿಯುತ್ತಾರೆ. ತಮ್ಮ ಧ್ವನಿಯನ್ನು ಬದಲಾಯಿಸಿಕೊಂಡು ಕಾಲ್‌ಸೆಂಟರ್‌ನಲ್ಲಿ ಮಾತನಾಡುತ್ತಾರೆ. ತಮ್ಮ ಹೆಸರನ್ನು ಬದಲಾವಣೆ ಮಾಡಿಕೊಳ್ಳುತ್ತಾರೆ. ಇಲ್ಲಿಯೇ ಇದ್ದು ತಾನು ಎಂದಾದರೂ ಒಂದು ದಿನ ನ್ಯೂಯಾರ್ಕ್‌ಗೆ ಹೋಗಿ ಅಲ್ಲಿನ ಅಮೆರಿಕನ್ ಸಿಟಿಜನ್ ಆಗುವ ಕನಸನ್ನು ಕಾಣುವ ಭಾರತೀಯರೇ ಇಂದು ಹೆಚ್ಚು. ಈಗ ಅವರೇ ಹೇಳುತ್ತಿದ್ದಾರೆ– ಸೋನಿಯಾ ಗಾಂಧಿ ನಮ್ಮ ದೇಶದವಳಲ್ಲ ಎಂದು.' ಹೀಗೆ ಸೋನಿಯಾ ವಿದೇಶಿ ಎಂದೂ ಹೇಳುವುದೂ ಒಂದು ರಾಜಕಾರಣದ ತಂತ್ರವೇ.[೨೨]

### ೪.೫ ಉಳಿದ ಚಿಂತಕರು, ದಲಿತ ಸಂಘರ್ಷ ಸಮಿತಿ ಹಾಗೂ ಕಮ್ಯುನಿಷ್ಟ್ ಪಕ್ಷಗಳ ನಿಲುವುಗಳು

ಕರ್ನಾಟಕದಲ್ಲಿ ಮತೀಯವಾದವನ್ನು ವಿರೋಧಿಸುತ್ತಾ ಸಾಮರಸ್ಯರೂಪಿ ಬದುಕನ್ನು ಕಾಣಬಯಸುವ ದೊಡ್ಡ ಜಾತ್ಯತೀತ ಪಡೆಯೇ ಇದೆ. ವ್ಯಕ್ತಿಗಳು ಹಾಗೂ ಸಂಘಟನೆಗಳಿಂದ ಏಕಕಾಲಕ್ಕೆ ಕೋಮುವಾದ ವಿರೋಧಿ ಚಳವಳಿಗಳು ರೂಪುಗೊಳ್ಳುತ್ತಿವೆ. ಆ ಮೂಲಕ ಮತೀಯವಾದಿಗಳ ಆಲೋಚನಾ ಕ್ರಮ, ಕಾರ್ಯತಂತ್ರ, ಆಕ್ರಮಣಗಳು, ಅವರ ಸುಳ್ಳುಗಳನ್ನು ಕಾಲಕಾಲಕ್ಕೆ ಅರ್ಥೈಸುತ್ತಾ ಬಂದಿವೆ.

'ದೇವರು ಎಂದು ಜನ ಮೂರು ಹೊತ್ತೂ ನೆನಪಿಸಿಕೊಳ್ಳುವ ಶ್ರೀರಾಮನಿಗೆ ಒಂದು Date of birth ಮತ್ತು Date of place ಗಳನ್ನು ದಯಪಾಲಿಸಲು' ರಥಯಾತ್ರೆ ಮಾಡಿದ ಅಧ್ವಾನಿಯವರ ಕ್ರಮವನ್ನು ಜಿ. ರಾಜಶೇಖರ್ ಒಂದು ರಾಜಕೀಯ ಪ್ರಚಾರದ ತಂತ್ರವನ್ನಾಗಿ ಕಂಡಿದ್ದಾರೆ.[೨೩] 'ಅಯೋಧ್ಯೆಯಲ್ಲಿ ಅದೂ ಬಾಬರಿ ಮಸೀದಿ ಇರುವ

ಜಾಗದಲ್ಲೇ ಒಂದು ರಾಮ ಮಂದಿರವನ್ನು ಕಟ್ಟದೇ ಇರುವುದು ತಮ್ಮ ಬದುಕಿನ ಅತಿ ತುರ್ತಾದ ಸಮಸ್ಯೆ ಎಂದು ಹಿಂದೂಗಳು ಇವರಿಗೆ ಹೇಳಿದ್ದು ಯಾವಾಗ? ತಮ್ಮ ದೇವರು ಮತ್ತು ನಂಬಿಕೆಗಳ ಬಗ್ಗೆ ಮಾತಾಡಲೂ ಹಿಂದೂಗಳು ಯಾವತ್ತಾದರೂ, ಯಾರನ್ನೇ ಆಗಲಿ ತಮ್ಮ ವಕ್ತಾರರನ್ನಾಗಿ ನೇಮಿಸಿಕೊಂಡದ್ದು ಇದೆಯೇ?' ಎಂಬ ಪ್ರಶ್ನೆಗಳನ್ನು ಎತ್ತುವ ಮೂಲಕ ರಾಜಶೇಖರ್, ರಾಮ ಹೇಗೆ ಮತೀಯವಾದಿಗಳ ರಾಜಕೀಯ ಬಂಡವಾಳ ಎಂಬುದರ ಕಡೆಗೆ ನಮ್ಮ ದೃಷ್ಟಿಯನ್ನು ಹರಿಸಿದ್ದಾರೆ.[೨೪]

ಸಂಘಪರಿವಾರ ಯಾವಾಗಲೂ ಮುಸ್ಲಿಮರನ್ನು ಬಿ.ಜೆ.ಪಿಯೇತರ ಪಕ್ಷಗಳ ಓಟ್‌ಬ್ಯಾಂಕ್ ಎಂದು ಕರೆಯುತ್ತಿರುತ್ತದೆ. ಆದರೆ 'ಮುಸ್ಲಿಮರು ಓಟ್‌ಬ್ಯಾಂಕ್ ಅಲ್ಲವೇ ಅಲ್ಲ. ಶೇ. ೧೨ರಷ್ಟಿರುವ ಮುಸ್ಲಿಮರನ್ನು ನೆಚ್ಚಿಕೊಂಡು ಯಾವ ಪಕ್ಷವೂ ಗೆಲ್ಲಲಾರದು. ಅಲ್ಲದೇ ಇರುವ ಶೇ. ೧೨ರಷ್ಟು ಮುಸ್ಲಿಮರು ಕೂಡ ದೇಶದ ತುಂಬ ಹಂಚಿಹೋಗಿದ್ದಾರೆ. ಅವರು ಒಂದು ಗುಂಪಾಗಿ ಸಿಗುವುದು ಕಾಶ್ಮೀರದಲ್ಲಿ ಮಾತ್ರ. ಇಷ್ಟಾದರೂ ಮುಸ್ಲಿಮರನ್ನು ಓಟ್‌ಬ್ಯಾಂಕ್ ಎಂದು ಪ್ರಸ್ತಾಪಿಸುವುದರ ಹಿಂದಿರುವ ನಿಜವಾದ ಅರ್ಥವೇನೆಂದರೆ ಮುಸ್ಲಿಮರಿಗೆ ಮತದಾನದ ಹಕ್ಕು ಇರಕೂಡದು ಎಂಬುದು ಸಂಘಪರಿವಾರದ ಇಚ್ಛೆ' ಎಂಬ ವಿಶೇಷ ಒಳನೋಟವೊಂದನ್ನು ಜಿ. ರಾಜಶೇಖರ್ ನೀಡಿದ್ದಾರೆ.[೨೫]

ರಹಮತ್ ತರೀಕೆರೆ, ಕೆ. ಫಣಿರಾಜ್ ವಿವರಿಸುವಂತೆ ಜಿ. ರಾಜಶೇಖರ್ ಕೂಡ ಮತೀಯವಾದಿಗಳು ತಮ್ಮ ವಾದಸರಣಿಗೆ ಅನುಕೂಲವಾಗುವ selective ಚರಿತ್ರೆಯನ್ನು ಕಟ್ಟುತ್ತಾರೆ ಎಂಬುದನ್ನು ಗ್ರಹಿಸಿದ್ದಾರೆ. ಮುಸ್ಲಿಮರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಯ ಬಗ್ಗೆ ಅಧ್ಯಯನ ಮಾಡಿರುವ ಜಿ. ರಾಜಶೇಖರ್, ಸಾಮಾನ್ಯ ಪೊಲೀಸು, ಸೈನಿಕ, ಶಿಕ್ಷಣ ಸಂಸ್ಥೆ, ಯಾವ ಸರ್ಕಾರಿ ಹುದ್ದೆ ಹಾಗೂ ಆಸ್ತಿವಂತ ವರ್ಗಗಳಲ್ಲೂ ಮುಸ್ಲಿಮರು ಇಲ್ಲ ಎಂಬುದನ್ನು ಗುರುತಿಸಿದ್ದಾರೆ. ಇವರು ಕಂಡುಕೊಂಡಿರುವಂತೆ ಮುಸ್ಲಿಮರು ಕುಶಲ ಕಸುಬುದಾರರು ಮತ್ತು ಸಣ್ಣ ವರ್ತಕರು. ಆಧುನಿಕ ಬಂಡವಾಳಶಾಹೀಕರಣ ಹಾಗೂ ಕೈಗಾರಿಕೀಕರಣದಿಂದಾಗಿ ಮುಸ್ಲಿಮರ ಈ ಕಸುಬುಗಳೂ ಹಾಳಾಗಿವೆ ಎಂದು ಜಿ. ರಾಜಶೇಖರ್ ಗ್ರಹಿಸಿದ್ದಾರೆ.[೨೬]

ಗಾಂಧಿ, ಲೋಹಿಯಾ, ಬುದ್ಧ, ಬಸವ, ಅಲ್ಲಮ ಹಾಗೂ ಅಂಬೇಡ್ಕರ್ ಅಂಥವರಿಂದ ತಮ್ಮ ನೋಟಕ್ರಮಗಳನ್ನು ರೂಪಿಸಿಕೊಂಡಿದ್ದ, ಕನ್ನಡ ಸಂಸ್ಕೃತಿ ಚಿಂತನೆಯಲ್ಲಿ ಬಹು ಮುಖ್ಯವಾದ ಜಾತ್ಯತೀತ ದನಿ ಎಂದರೆ ಕೆ. ರಾಮದಾಸ್. ಆಧುನಿಕ ರಾಜಕಾರಣವೇ ಧರ್ಮವನ್ನು ಕಲುಷಿತಗೊಳಿಸಿದೆ ಎಂದು ಅವರು ಕಂಡುಕೊಂಡಿದ್ದಾರೆ. ಧರ್ಮ ಸಂಘಟನಾತ್ಮಕ ರೂಪವನ್ನು ಪಡೆದರೆ ಅದು ಭಯೋತ್ಪಾದಕವಾಗುತ್ತದೆ ಎಂದು ನಂಬಿರುವ ಇವರು, ಸಂಘಟನಾತ್ಮಕವಾಗಿ ಕಾಣುವ ಎಲ್ಲ ಮತೀಯವಾದಿಗಳೂ ಧರ್ಮವನ್ನು ರಾಜಕೀಯ ಸಾಧನವಾಗಿ ಮಾಡಿಬಿಡುತ್ತಾರೆ ಎನ್ನುತ್ತಾರೆ. ಘನಾಕೃತಿಯಾಗುವ ಮೂಲಕ ಜೀವವಿರೋಧಿ ಶಕ್ತಿಯಾಗಿ ರೂಪುಗೊಳ್ಳುವ ಧರ್ಮದ ಸ್ಥಾವರರೂಪಿ ಗುಣಗಳು, ಬಸವಣ್ಣನವರ ಜಂಗಮರೂಪಿ ತತ್ತ್ವಗಳನ್ನು ನಿರಾಕರಿಸುತ್ತವೆ ಎಂಬುದು ರಾಮದಾಸರ ನಿಲುವು. ಆದರೆ ಬಸವಣ್ಣನನ್ನು ಧಾರ್ಮಿಕ ಗುರು ಅಂದುಕೊಂಡ ಮತ್ತೊಂದು ಬಗೆಯ ಮೂಲಭೂತವಾದಿಗಳು ಶಿವಾಜಿಯಂತೆ ಕತ್ತಿ ಹಿಡಿದು, ಕುದುರೆ ಮೇಲೆ ಯುದ್ಧಕ್ಕೆ ಹೊರಟ ಬಸವಣ್ಣನನ್ನು ಮೂರ್ತೀಕರಿಸಿಕೊಂಡರು ಎನ್ನುತ್ತಾರೆ ರಾಮದಾಸ್. ಹಾಗೆಯೇ ಮತೀಯಸಾಮರಸ್ಯದ ಸಂಕೇತವಾಗಿ ಚಲನಶೀಲವಾಗಿದ್ದ, ಜಂಗಮ ತತ್ತ್ವಕ್ಕೆ ಹೆಸರಾಗಿದ್ದ ಬಾಬಾಬುಡನ್‌ಗಿರಿಯನ್ನು ವಿವಾದದ ಕೇಂದ್ರವನ್ನಾಗಿ ಮಾಡಿದ ಸಂಘಪರಿವಾರಗಳ

ಕ್ರಮವನ್ನು ರಾಮದಾಸರು ವಿರೋಧಿಸಿದ್ದಾರೆ. ಇಡೀ ಸರ್ಕಾರಿ ಯಂತ್ರವನ್ನು ಭ್ರಷ್ಟಗೊಳಿಸಿ, ಶಾಲೆ, ಆಸ್ಪತ್ರೆಗಳನ್ನು ನಾಶ ಮಾಡಿ ಬಸ್ಸುಗಳಿಗೆ ಬೆಂಕಿ ಹಚ್ಚುವ ರಾಷ್ಟ್ರದ್ರೋಹಿಗಳು ಭಾರತ, ಪಾಕಿಸ್ತಾನದ ವಿರುದ್ಧ ಆಡುವ ಕ್ರಿಕೆಟ್‌ನಲ್ಲಿ ದೇಶಪ್ರೇಮವನ್ನು ಕಾಣುತ್ತಿದ್ದಾರೆ ಎಂಬ ವ್ಯಂಗ್ಯದಲ್ಲಿ ರಾಮದಾಸ್ ನಮ್ಮ ರಾಷ್ಟ್ರಪ್ರೇಮವನ್ನು ಟೀಕಿಸಿದ್ದಾರೆ.[೨೭]

ಸಂಘಟನಾತ್ಮಕ ಹೋರಾಟಗಳಿಗೆ ಯುವಜನತೆಯನ್ನು ಜಾಗೃತಗೊಳಿಸುವ ಕಾಯಕಕ್ಕೆ ತೊಡಗಿಸಿಕೊಂಡಿದ್ದ ರಾಮದಾಸ್ ಅವರು 'ಮಾನವ ಮಂಟಪ' ಎಂಬ ವೇದಿಕೆಯನ್ನು ಕಟ್ಟಿದ್ದಾರೆ. ಅಂತರ ಜಾತಿ ಮತ್ತು ಅಂತರ ಧರ್ಮೀಯ ಮದುವೆಗಳನ್ನು ಪ್ರೋತ್ಸಾಹಿಸುವ ಮೂಲಕ ಹನ್ನೆರಡನೇ ಶತಮಾನದ ಬಸವಣ್ಣನವರ ಆಶಯಗಳನ್ನು ಇಪ್ಪತ್ತನೇ ಶತಮಾನದಲ್ಲಿ ಸಾಕಾರಗೊಳಿಸಿದ 'ಮಾನವ ಮಂಟಪ' ಕರ್ನಾಟಕವನ್ನು ಜಾತ್ಯತೀತತೆಯ ಕಡೆಗೆ ದಾಟಿಸಲೆತ್ನಿಸುತ್ತಿರುವ ವೇದಿಕೆಯಾಗಿದೆ.

ಕೆ.ವಿ. ಸುಬ್ಬಣ್ಣ, ಪಿ. ಲಂಕೇಶ್, ಯು.ಆರ್. ಅನಂತಮೂರ್ತಿಯವರಂಥ ಚಿಂತಕರು ಲೋಹಿಯಾವಾದಿ, ಗಾಂಧಿವಾದಿ ತಾತ್ತ್ವಿಕ ನೋಟಗಳ ಮೂಲಕ, ಸಾಂಸ್ಕೃತಿಕ ಮತ್ತು ರಾಜಕೀಯ ಆಯಾಮಗಳಿಂದ ಕೋಮುವಾದವನ್ನು ಗ್ರಹಿಸಿದ್ದಾರೆ. ಕರ್ನಾಟಕದ ಕೋಮುವಾದಿ ವಿರೋಧಿ ಚಿಂತನೆಯಲ್ಲಿ ತಮ್ಮದೇ ಆದ ಧಾರೆಯನ್ನು ಹೊಮ್ಮಿಸಿರುವ 'ಚರಿತ್ರಕಾರ ಎಸ್. ಚಂದ್ರಶೇಖರ್, ಇವರಿಗಿಂತ ಭಿನ್ನವಾಗಿ ಮತೀಯವಾದಕ್ಕೆ ಎದುರಾಗಿದ್ದಾರೆ. ವಸಾಹತುಕಾಲಘಟ್ಟದಲ್ಲಿ ಬ್ರಿಟಿಷ್ ಚರಿತ್ರಕಾರರಿಂದ ಭಾರತದಲ್ಲಿ ರೂಪುಗೊಂಡ ಚರಿತ್ರೆಯ ಸಂಕಥನಗಳು ಹೇಗೆ ಮತೀಯವಾದಿ ಹಾಗೂ ತಿಲಕರಂಥ ಉಗ್ರ ರಾಷ್ಟ್ರೀಯವಾದಿ ನೋಟಕ್ರಮಗಳನ್ನು ಹುಟ್ಟಿಸಿದವು ಎಂಬುದರ ಬಗೆಗೆ ಎಸ್. ಚಂದ್ರಶೇಖರ್ ತಮ್ಮ ಚಿಂತನೆಯನ್ನು ಬಿತ್ತಿದ್ದಾರೆ. ಆಧುನಿಕ ಕನ್ನಡ ಸಂಸ್ಕೃತಿ ಚಿಂತನೆ ಕೋಮುವಾದಕ್ಕೆ ಎದುರಾದ ಕ್ರಮಗಳನ್ನು ಹುಡುಕುವ ಸಂದರ್ಭದಲ್ಲಿ ಚರಿತ್ರೆಯ ಅಧ್ಯಯನದ ಮೂಲಕ ವಸಾಹತುಕಾಲಘಟ್ಟ ಹಾಗೂ ವಸಾಹತೋತ್ತರ ಭಾರತದ ಚಲನೆಯನ್ನು ಗ್ರಹಿಸಿರುವ ಚಂದ್ರಶೇಖರ್ ಅವರ ಚಿಂತನಾಕ್ರಮಗಳು, ಬಹು ಮುಖ್ಯವಾದ ಒಳನೋಟಗಳನ್ನು ನೀಡುತ್ತವೆ. ಇಂಗ್ಲಿಷ್ ಶಿಕ್ಷಣವನ್ನು ದಕ್ಕಿಸಿಕೊಂಡ, ಬ್ರಿಟಿಷರ ಚರಿತ್ರೆಯ ಗ್ರಹಿಕೆಗಳಿಂದ ಪ್ರೇರಿತವಾಗಿ ರಾಷ್ಟ್ರೀಯ ಭಾವನೆ ಮತ್ತು ಪುನರುತ್ಥಾನದ ಗೀಳನ್ನು ಹತ್ತಿಸಿಕೊಂಡ ಭಾರತದ ಮೇಲ್ವರ್ಗ ಮತೀಯವಾದವನ್ನು ಅಪ್ಪಿ ಪೋಷಿಸಿತು ಎಂದು ಚಂದ್ರಶೇಖರ್ ಗ್ರಹಿಸಿದ್ದಾರೆ. ಈ ಭಾವನೆಗಳು ಭಾರತದ ನವೋದಯ ಸಾಹಿತ್ಯದಲ್ಲಿ ಹೇಗೆ ಅಭಿವ್ಯಕ್ತಿಗೊಂಡವು ಎಂಬುದನ್ನು ಬಂಕಿಮಚಂದ್ರರ 'ಆನಂದ ಮಠ'ದಂಥ ಕಾದಂಬರಿಯ ಮೂಲಕ ತೋರಿಸಲೆತ್ನಿಸಿದ್ದಾರೆ. ಆಲೂರು ವೆಂಕಟರಾಯರೂ ಈ ಮತೀಯತೆಯ, ರಾಷ್ಟ್ರೀಯತೆಯ ಹಾಗೂ ಪುನರುತ್ಥಾನದ ಮೋಹಗಳನ್ನು ಪ್ರತಿಪಾದಿಸಿದವರು ಎನ್ನುತ್ತಾ ಚಂದ್ರಶೇಖರ್, ಬಿ.ಎಂ.ಶ್ರೀ. ಕುವೆಂಪು, ಕಾರಂತರಂಥ ಲೇಖಕರಲ್ಲೂ ಅವು ಪ್ರತಿಫಲಿಸಿದವು ಎಂಬುದನ್ನು ಕಾಣಿಸಿದ್ದಾರೆ.[೨೮]

ಮಠಗಳು ಮತೀಯ ಭಾವನೆಯನ್ನು ಎಚ್ಚರಿಸುತ್ತಾ, ಸಮಾಜಕ್ಕೆ ಹಿಮ್ಮುಖ ಚಲನೆ ಕೊಡುವ ಅಥವಾ ನಿಂತಲ್ಲೇ ನಿಲ್ಲುವಂತೆ ಮಾಡಿ ಸಮಾಜವನ್ನು ಕೊಳೆಸುವ ನೆಲೆಗಳು ಎಂದು ತಿಳಿಯಲಾಗಿತ್ತು. ವಚನ ಚಳವಳಿಯನ್ನು ಸಾಂಸ್ಥಿಕ ಧರ್ಮಗಳು

ಮಠೀಯಗೊಳಿಸಿದವು ಎನ್ನುತ್ತಿದ್ದ ಸಂದರ್ಭದಲ್ಲಿ 'ಮಠೀಯ' ಎನ್ನುವ ಪದವೇ ನೆಗೆಟಿವ್ ಆದಂಥ ನೆಲೆಯಲ್ಲಿತ್ತು. ಮಠೀಯಗೊಳ್ಳುವುದೆಂದರೆ ಜಂಗಮರೂಪಿಯಾದದ್ದು ಘನವಾಗುವ, ಜೀವವಿರೋಧಿಯಾಗುವ, ಸ್ಥಾವರರೂಪಿಯಾಗುವ ಕ್ರಮ ಎಂದು ಅರಿಯಲಾಗಿತ್ತು. ಇಪ್ಪತ್ತನೆಯ ಶತಮಾನದಲ್ಲೂ ಕೂಡ ಮಠಗಳು ವೈದ್ಯಕೀಯ, ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಅವುಗಳನ್ನು ವಾಣಿಜ್ಯೋದ್ಯಮಗಳನ್ನಾಗಿ ಮಾಡಿಕೊಂಡು ದೊಡ್ಡ ಬಂಡವಾಳಶಾಹಿಗಳಾಗಿದ್ದವು. ಇಂದಿನ ಹೊಸ ಚಲನೆಗಳೆಂಬಂತೆ ಅದೇ ಮಠೀಯ ನೆಲೆಗಳಿಂದ ಮಠೀಯವಾದವನ್ನು ವಿರೋಧಿಸುವ ಧ್ವನಿಗಳೂ ಹುಟ್ಟಿವೆ. ಜೀವಪರವಾದ ಚಿಂತನೆಗಳನ್ನು ಹೊಮ್ಮಿಸುತ್ತಿರುವ ಕೆಲವು ಸ್ವಾಮೀಜಿಗಳು ಮಠೀಯವಾದವನ್ನು ವಿರೋಧಿಸುತ್ತಿದ್ದಾರೆ.

ಸಾಣೆಹಳ್ಳಿ ಮಠದ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಮಿಗಳು ಮಠದ ಆವರಣದಲ್ಲೇ 'ಮಠೀಯವಾದ, ಭಯೋತ್ಪಾದನೆ ಮತ್ತು ಧರ್ಮ' ಎಂಬ ವಿಷಯವನ್ನು ಕುರಿತಾಗಿ ವಿಚಾರ ಸಂಕೀರ್ಣವೊಂದನ್ನು ನಡೆಸಿದ್ದಾರೆ. ಕರ್ನಾಟಕದ ಜಾತ್ಯತೀತರನ್ನು ಒಂದೆಡೆ ಸೇರಿಸಿ ಕೋಮುಸಾಮರಸ್ಯದ ಬಗ್ಗೆ ಚರ್ಚಿಸಲು ವೇದಿಕೆಯನ್ನು ಕಲ್ಪಿಸಿದ್ದಾರೆ. ನಿಡುಮಾಮಿಡಿ ಮಠವೂ ಈ ದಿಸೆಯಲ್ಲಿ ಸಾಗಿ ಸಮಾಜಕ್ಕೆ ಮುಮ್ಮುಖ ಚಲನೆಯನ್ನು ನೀಡುತ್ತಿದೆ. ಇವು ಈವತ್ತಿನ ಮಠೀಯಕ್ಷೋಭೆಯ ಭಾರತದಲ್ಲಿ ಮುಖ್ಯ ಚಲನೆಗಳು.

ಕೋಮು ಸೌಹಾರ್ದ ವೇದಿಕೆ ಬಾಬಾಬುಡನ್‌ಗಿರಿಯ ವಿವಾದದ ಸಂದರ್ಭದಲ್ಲಿ ಮಠೀಯವಾದಿಗಳ ವಿರುದ್ಧ ಗಟ್ಟಿಯಾಗಿ ದನಿ ಎತ್ತಿದೆ. ಜಾಗೃತ ಸಾಹಿತ್ಯ ವೇದಿಕೆ, ಮಹಿಳಾ ಜಾಗೃತಿಯ ಸಂಘಟನೆಗಳು ಕೋಮುವಾದವನ್ನು ಎದುರಿಸಲು ಮುಂದಾಗಿವೆ. ಕರ್ನಾಟಕ ದಲಿತ ಸಂಘರ್ಷ ಸಮಿತಿಯೂ, ತನ್ನ ಪಾಲಿಗೆ ಮುಳುವಾಗುವ ಕೋಮುವಾದವನ್ನು, ಹಿಂದುತ್ವದ ಹೆಸರಿನಲ್ಲಿ ಬೆಳೆದಿರುವ ನವಪುರೋಹಿತಶಾಹಿಯನ್ನು ಸಮರ್ಥವಾಗಿ ಎದುರಾಗಿದೆ. ಆ ದಿಸೆಯಲ್ಲಿ ತನ್ನದೇ ಆದ ಹೋರಾಟ ಮತ್ತು ಚಿಂತನೆಗಳನ್ನು ರೂಪಿಸುತ್ತಾ ಬಂದಿದೆ. 'ದಲಿತ ಸಂಘರ್ಷ ಸಮಿತಿಗಳು ಹಾಗೂ ಕಮ್ಯುನಿಸ್ಟ್ ಪಕ್ಷಗಳು ಕರ್ನಾಟಕದಲ್ಲಿ ನಿರಂತರವಾಗಿ ಮಠೀಯವಾದಕ್ಕೆ ಪ್ರತಿರೋಧ ಒಡ್ಡಿವೆ' ಎಂದು ನಟರಾಜ್ ಹುಳಿಯಾರ್ ಬರೆಯುತ್ತಾರೆ.[೭] ಕಮ್ಯುನಿಸ್ಟ್ ಹಾಗೂ ದಲಿತ ಸಂಘರ್ಷ ಸಮಿತಿಗಳ ನಾಯಕರು ಬಾಬಾಬುಡನ್‌ಗಿರಿ, ಟಿಪ್ಪು ವಿವಾದದ ಸಂದರ್ಭದಲ್ಲಿ ಪ್ರಖರ ಜಾತ್ಯತೀತ ನಿಲುವು ತಳೆದಿರುವುದಷ್ಟೇ ಅಲ್ಲದೆ ಸಂಘಟಿತ ಹೋರಾಟಗಳನ್ನು ಕಟ್ಟಿ ಕೋಮುವಾದವನ್ನು ವಿರೋಧಿಸುತ್ತಾ ಬಂದಿದ್ದಾರೆ. ದಲಿತ ಸಂಘರ್ಷ ಸಮಿತಿಗಳ ನಾಯಕರಾದ ಮಾವಳ್ಳಿ ಶಂಕರ್, ಇಂದೂಧರ ಹೊನ್ನಾಪುರ, ಲಕ್ಷ್ಮೀನಾರಾಯಣ ನಾಗವಾರ ಹಾಗೂ ಕಮ್ಯುನಿಸ್ಟ್ ಪಕ್ಷಗಳ ನಾಯಕರಾದ ಜಿ.ಎನ್. ನಾಗರಾಜ್, ಸಿದ್ಧನಗೌಡ ಪಾಟೀಲ ತಮ್ಮ ವಿಶ್ಲೇಷಣೆ ಹಾಗೂ ಭಾಷಣಗಳ ಮೂಲಕ ಕೋಮುವಾದವನ್ನು ಸಮರ್ಥವಾಗಿ ಎದುರಿಸುತ್ತಾ ಬಂದಿದ್ದಾರೆ. ಕಮ್ಯುನಿಸ್ಟ್ ಪಕ್ಷಗಳು ಹಾಗೂ ದಲಿತ ಸಂಘರ್ಷ ಸಮಿತಿಗಳು ಕಾಲಕಾಲಕ್ಕೆ ಪ್ರಕಟಿಸಿರುವ ಕರಪತ್ರಗಳು ಕೋಮುವಾದದ ಮುಖಗಳನ್ನು ಬಯಲಿಗೆಳೆಯುತ್ತಾ ಕರ್ನಾಟಕದ ಜನತೆಯನ್ನು ಜಾತ್ಯತೀತ ಹಾದಿಗೆ ಒಯ್ಯುತ್ತಾ ಬಂದಿವೆ.

ಹೀಗೆ ಕರ್ನಾಟಕದ ಚಿಂತಕರು, ಚಿಂತಕಿಯರು ಹಾಗೂ ಜನಸಂಘಟನೆಗಳು ಭಾರತದಲ್ಲಿ ವಿಶಿಷ್ಟವಾದ ಕೋಮುವಾದ ವಿರೋಧಿ ತಾತ್ವಿಕತೆ ಮತ್ತು ಹೋರಾಟಗಳನ್ನು ಸೃಷ್ಟಿಸುವಲ್ಲಿ ಯಶಸ್ವಿಯಾಗಿವೆ.

## ಕೊನೆ ಟಿಪ್ಪಣಿಗಳು

೧. ಆರ್.ಎಸ್. ಶರ್ಮ ಹಾಗೂ ಇತರರು, 'ರಾಮಜನ್ಮ ಭೂಮಿ ಬಾಬ್ರಿ ಮಸೀದಿ' ಪುಸ್ತಕದ ವಿವರಗಳು, ೧೯೯೧, ಬೆಂಗಳೂರು: ನವಕರ್ನಾಟಕ ಪ್ರಕಾಶನ.

೨. ಪಿ. ಲಂಕೇಶ್, 'ಇಟ್ಟಿಗೆ ಪವಿತ್ರವಲ್ಲ; ಜೀವ ಪವಿತ್ರ', ಟೀಕೆ– ಟಿಪ್ಪಣಿ, ಹತ್ತೊವರೆ ವರ್ಷದ ಕೆಲವು ಬರಹಗಳು, ೧೯೯೧, ಬೆಂಗಳೂರು: ಪತ್ರಿಕೆ ಪ್ರಕಾಶನ, ಪುಟ: ೫೨೯

೩. ಅದೇ, ಪುಟ: ೫೨೯

೪. ಅದೇ, ಪುಟ: ೫೩೧

೫. ನಟರಾಜ್ ಹುಳಿಯಾರ್, 'ಹಳೆಯ ದೇವರುಗಳೆಲ್ಲಾ ಸತ್ತು...', ಮತೀಯವಾದದ ಮುಖಗಳು, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ.

೬. ಪಿ. ಲಂಕೇಶ್, 'ಇಟ್ಟಿಗೆ ಪವಿತ್ರವಲ್ಲ; ಜೀವ ಪವಿತ್ರ', ಟೀಕೆ– ಟಿಪ್ಪಣಿ, ಹತ್ತೊವರೆ ವರ್ಷದ ಕೆಲವು ಬರಹಗಳು, ೧೯೯೧, ಬೆಂಗಳೂರು: ಪತ್ರಿಕೆ ಪ್ರಕಾಶನ, ಪುಟ: ೫೩೨

೭. ಕೆ.ವಿ. ಸುಬ್ಬಣ್ಣ, 'ಪ್ರತಿಮೆಗಳನ್ನು ಲಾಂಛನಕ್ಕಿಳಿಸುತ್ತಿದ್ದೇವೆ' ಸಂ: ಟಿ.ಪಿ. ಅಶೋಕ, ಅರೆಶತಮಾನದ ಅಲೆ ಬರಹಗಳು, ೨೦೦೪, ಹೆಗ್ಗೋಡು: ಅಕ್ಷರ ಪ್ರಕಾಶನ, ಪುಟ: ೨೦೨.

೮. ಕೆ.ವಿ. ಸುಬ್ಬಣ್ಣ, 'ಭೂತದ ಸವಾಲಿಗೆ ನಮ್ಮ ಜವಾಬು'. ಸಂ: ಟಿ.ಪಿ. ಅಶೋಕ, ಅರೆಶತಮಾನದ ಅಲೆ ಬರಹಗಳು, ೨೦೦೪, ಹೆಗ್ಗೋಡು: ಅಕ್ಷರ ಪ್ರಕಾಶನ, ಪುಟ–೨೦೨.

೯. ಕೆ.ಪಿ. ಪೂರ್ಣಚಂದ್ರ ತೇಜಸ್ವಿ, 'ನರಭಕ್ಷಕರ ಫಿಜಿದ್ವೀಪ'. ಪೆಸಿಫಿಕ್ ದ್ವೀಪಗಳು, ೨೦೦೦, ಮೈಸೂರು: ಪುಸ್ತಕ ಪ್ರಕಾಶನ, ಪುಟ: ೨೩–೨೪

೧೦. ಕೆ.ವಿ. ಸುಬ್ಬಣ್ಣ, 'ಭೂತದ ಸವಾಲಿಗೆ ನಮ್ಮ ಜವಾಬು', ಸಂ: ಟಿ.ಪಿ. ಅಶೋಕ, ಅರೆಶತಮಾನದ ಅಲೆ ಬರಹಗಳು, ೨೦೦೪, ಹೆಗ್ಗೋಡು: ಅಕ್ಷರ ಪ್ರಕಾಶನ, ಪುಟ–೧೫೭.

೧೧. ಡಿ.ಆರ್. ನಾಗರಾಜ್, 'ಚಲಿಸುವ ಧರ್ಮ ಮರೆತು ನಿಂತ ಕಟ್ಟಡಕ್ಕಾಗಿ ಸಾಯುವವರು', ಸಂ: ಅಗ್ರಹಾರ ಕೃಷ್ಣಮೂರ್ತಿ, ಸಂಸ್ಕೃತಿ ಕಥನ, ೨೦೦೨, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಪುಟ: ೧೭೪.

೧೨. ಅದೇ, ಪುಟ: ೧೭೫.

೧೩. ಅದೇ, ಪುಟ: ೧೭೫.

೧೪. ಅದೇ, ಪುಟ: ೧೭೬.

೧೫. ಅದೇ, ಪುಟ: ೧೭೬–೧೭೭

೧೬. ಯು.ಆರ್. ಅನಂತಮೂರ್ತಿ, 'ಯಾವ ಬಗೆಯ ರಾಷ್ಟ್ರ ಈ ಭಾರತ', ಯುಗ ಪಲ್ಲಟ– ನಮ್ಮ ಕಾಲದ ತಲ್ಲಣಗಳು, ೨೦೦೪, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಪುಟ:೫೭

೧೭. ಅದೇ.

೧೮. ಅದೇ.

೧೯. ಅದೇ.

೨೦. ಯು.ಆರ್. ಅನಂತ ಮೂರ್ತಿ, 'ಕೋಮುವಾದವನ್ನು ಹಿಮ್ಮೆಟ್ಟಿಸುವತ್ತ...' ವಾಲ್ಮೀಕಿಯ ನೆವದಲ್ಲಿ, ೨೦೦೭, ಬೆಂಗಳೂರು: ಅಭಿನವ ಪ್ರಕಾಶನ, ಪುಟ: ೧೬೩

೨೧. ಯು.ಆರ್. ಅನಂತಮೂರ್ತಿ, 'ಓಟ್‌ಬ್ಯಾಂಕ್ ರಾಜಕಾರಣದ ಮಾತು–ಕೃತಿ', ಋಜುವಾತು, ೨೦೦೭, ಬೆಂಗಳೂರು: ಅಂಕಿತ ಪ್ರಕಾಶನ.

೨೨. ಯು.ಆರ್. ಅನಂತಮೂರ್ತಿ, 'ಕೋಮುವಾದವನ್ನು ಹಿಮ್ಮೆಟ್ಟಿಸುವತ್ತ...' ವಾಲ್ಮೀಕಿಯ ನೆವದಲ್ಲಿ, ೨೦೦೭, ಬೆಂಗಳೂರು: ಅಭಿನವ ಪ್ರಕಾಶನ, ಪುಟ: ೧೬೪–೧೬೫.

೨೩. ಜಿ. ರಾಜಶೇಖರ್ ಅವರ 'ರಥಯಾತ್ರೆಯ ರಾಜಕೀಯ' ಲೇಖನದ ಗ್ರಹಿಕೆಗಳು, ರಥಯಾತ್ರೆಯ ರಾಜಕೀಯ, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ.

೨೪. ಅದೇ.

೩೫. ಅದೇ.

೩೬. ಅದೇ.

೨೭. ಕೆ.ರಾಮದಾಸ್, 'ಜಾತಿ ಬಿಡಿ, ಧರ್ಮ ಬಿಡಿ, ಮಾನವತೆಗೆ ಜೀವ ಕೊಡಿ' ಲೇಖನದ ವಿವರಗಳು, ಸಂ: ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು, ಮತೀಯವಾದ, ಭಯೋತ್ಪಾದನೆ ಮತ್ತು ಧರ್ಮ, ೨೦೦೨, ಸಾಣೆಹಳ್ಳಿ: ಶ್ರೀ ಶಿವಕುಮಾರ ಹವ್ಯಾಸಿ ಕಲಾ ಸಂಘ.

೨೮. ಎಸ್. ಚಂದ್ರಶೇಖರ್, 'ರಾಷ್ಟ್ರೀಯ-ಚಳವಳಿ: ಕನ್ನಡ ಸಾಹಿತ್ಯ ಮತ್ತು ಕೋಮು ಸಮಸ್ಯೆ', ಲೇಖನದ ಗ್ರಹಿಕೆಗಳು, ಸಾಹಿತ್ಯ ಮತ್ತು ಚರಿತ್ರೆ, ೧೯೯೯, ತಿಪಟೂರು: ನಮ್ಮ ಪ್ರಕಾಶನ.

೨೯. ನಟರಾಜ್ ಹುಳಿಯಾರ್, 'ಕನ್ನಡ ಟೈಮ್ಸ್' ವಾರಪತ್ರಿಕೆ, ಸಂ: ಕೆ.ಎಲ್. ಚಂದ್ರಶೇಖರ್, ಸಂಪುಟ: ೧, ಸಂಚಿಕೆ:೨೬
.

# ಅಧ್ಯಾಯ ೫

# ಗೋರಕ್ಷಣೆಯ ನೆಪದಲ್ಲೊಂದು ಆಹಾರ ಸಂಕಥನ

ಭಾರತದ ಜನಜೀವನದಲ್ಲಿ ಹಲ ಬಗೆಯ ವೈವಿಧ್ಯತೆಗಳಿರುವಂತೆಯೇ ಆಹಾರ ಪದ್ಧತಿಯಲ್ಲೂ ವೈವಿಧ್ಯತೆ ಇದೆ. ಆದರೆ ಇಂದು, ಹಿಂದೂ ಮೂಲಭೂತವಾದಿಗಳು ಮತ್ತು ಕೋಮುವಾದಿಗಳು ಸಸ್ಯಾಹಾರವೇ ಬಹುಮುಖ್ಯ ಆಹಾರ ಹಾಗೂ ಅದೇ ಶ್ರೇಷ್ಠ ಅನ್ನುವ ಸುಳ್ಳನ್ನು ಪ್ರಚಾರ ಮಾಡುತ್ತಿದ್ದಾರೆ. ಜೀವನಕ್ರಮವನ್ನು ನಿರ್ದೇಶಿಸುವ ಅಧಿಕಾರವರ್ಗವಾಗೇ ಬೆಳೆದು ಬಂದ ಬ್ರಾಹ್ಮಣರೇ ಹಿಂದುತ್ವವಾದಿ ರಾಜಕಾರಣದಲ್ಲಿರುವುದರಿಂದ ಈ ಬಗೆಯ ಆಹಾರಶ್ರೇಷ್ಠತಾ ಹುಸಿ ಸಿದ್ಧಾಂತ ಬೆಳೆಯುತ್ತಿದೆ. ಇದು ಸಾಂಸ್ಕೃತಿಕ ಅಧಿಕಾರದಲ್ಲಿರುವವರು ತಮ್ಮದೇ ಶ್ರೇಷ್ಠ ಮಾದರಿ ಎಂದು ಗುರುತಿಸಿಕೊಳ್ಳಲು ರೂಪಿಸಿಕೊಂಡ ಸಂಕಥನ.

ಇಂದು ಸಸ್ಯಾಹಾರವನ್ನು ಪ್ರತಿಪಾದಿಸುತ್ತಿರುವ ವೈದಿಕರು ತಾವೂ ಕೂಡ ಒಂದು ಕಾಲದಲ್ಲಿ ಮಾಂಸಾಹಾರಿಗಳಾಗಿದ್ದವರು ಎಂಬುದನ್ನು ಜಾಣತನದಿಂದ ಮರೆವಿನಲ್ಲಿರಿಸಿದ್ದಾರೆ. ಮಾಂಸಾಹಾರವನ್ನು ಸೇವಿಸುವ, ಅದರಲ್ಲೂ ಗೋಮಾಂಸವನ್ನು ಸೇವಿಸುವ ಅಸಂಖ್ಯಾತರು ಹಿಂದೂ ಕೋಮುವಾದಿಗಳ ಕಣ್ಣಿಗೆ ಕ್ರೂರಿಗಳಾಗಿ ಕಾಣುತ್ತಿದ್ದಾರೆ. ಸೂಕ್ಷ್ಮವಾಗಿ ನೋಡುವುದಾದರೆ ಈ ಸಸ್ಯಾಹಾರ ಪ್ರತಿಪಾದಕರಿಗೆ ಗೋಮಾಂಸದ ಬಗೆಗೆ ಉದ್ದೇಶಿತ ತಿರಸ್ಕಾರವಿದೆಯೇ ಹೊರತು, ಮಾಂಸಾಹಾರಕ್ಕಾಗಿ ಜೀವತೆರುವ ಇನ್ನಿತರ ಯಾವ ಪ್ರಾಣಿಗಳ ಮೇಲೂ ಕನಿಷ್ಠ ಪ್ರೀತಿ ಹಾಗೂ ಕರುಣೆ ಇಲ್ಲ. ಗೋಸಂರಕ್ಷಣೆ, ಗೋಶಾಲೆಯ ಬಗೆಗೆ ಬಡಿದುಕೊಳ್ಳುವ ಮಠಾಧೀಶರಿಗಾಗಲಿ, ಗೋವಧೆಯ ವಿರುದ್ಧ ಶಾಸನ ರೂಪಿಸಲೆತ್ನಿಸುವ ಕೋಮುವಾದಿ ರಾಜಕಾರಣಿಗಳಿಗಾಗಲಿ ಗೋವುಗಳ ಮೇಲೂ ನಿಜವಾದ ಪ್ರೀತಿ ಇಲ್ಲ. ಈ ಹುಸಿಭಕ್ತರಿಗಿರುವ ಪ್ರೀತಿಗಿಂತ, ಗೋವಿನ ಶ್ರಮವನ್ನು ಅವಲಂಬಿಸಿದ ಒಕ್ಕಲುತನವನ್ನೇ ತಮ್ಮ ಬಹು ಮುಖ್ಯ ಕಾಯಕವನ್ನಾಗಿ ಮಾಡಿಕೊಂಡಿರುವ ಅಸಂಖ್ಯಾತ ಜಾತಿಗಳ ರೈತ ಸಮೂಹ ಗೋವುಗಳ ಬಗೆಗೆ ತೋರುವ ಪ್ರೀತಿ ಆಳವಾದದ್ದು. ಕೋಮುವಾದಿಗಳ ಸಸ್ಯಾಹಾರ ಪ್ರಚಾರ ಹಾಗೂ ಗೋಸಂರಕ್ಷಣೆಯ ಹಿಂದಿರುವ ಮರ್ಮ ಇಷ್ಟೆ: ಹಿಂದುತ್ವವಾದಿಗಳ ದೃಷ್ಟಿಯಲ್ಲಿ ಕ್ರೂರಿಗಳಾಗಿರುವ ಮುಸಲ್ಮಾನರು ಮತ್ತು ಕ್ರಿಶ್ಚಿಯನ್ನರು ಗೋವುಗಳನ್ನೇ ಮಾಂಸಾಹಾರಕ್ಕಾಗಿ ಪ್ರಧಾನವಾಗಿ ಆಶ್ರಯಿಸಿರುವುದರಿಂದ, ಗೋವಧೆಯನ್ನು

ನಿಷೇಧಿಸಿದರೆ, ಮುಸಲ್ಮಾನರು ಮತ್ತು ಕ್ರಿಶ್ಚಿಯನ್ನರನ್ನು ಬಗ್ಗುಬಡಿದೆವೆಂಬ ವಿಕೃತ ಗೆಲುವಿನಲ್ಲಿ ತೇಲುವ ಹಂಬಲವಷ್ಟೇ. ಅದಲ್ಲದೆ ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರನ್ನು ಹೊರತುಪಡಿಸಿದರೂ, ಇದು ಭಾರತದ ಅಸಂಖ್ಯಾತ ಶೂದ್ರ ಹಾಗೂ ಅಸ್ಪೃಶ್ಯ ಸಮೂಹದ ಮೇಲೆ ಆಕ್ರಮಣಮಾಡುತ್ತಿದ್ದ ಬ್ರಾಹ್ಮಣಶಾಹಿಯ ನವೀನ ಆವೃತ್ತಿ ಕೂಡ. ಈ ದಾಟಿಯಲ್ಲಿ ವಾದ ಮಾಡುವ ಮೇಲ್ಜಾತಿ ಹಿಂದೂಗಳು, ಮಾಂಸಾಹಾರಕ್ಕಾಗಿ ಗೋವನ್ನು ಆಶ್ರಯಿಸಿರುವ ಮುಸಲ್ಮಾನರು ಮತ್ತು ಕ್ರಿಶ್ಚಿಯನ್ನರನ್ನು ದ್ವೇಷಿಸುವ ಸಂದರ್ಭದಲ್ಲಿ ತಾವು ಹಿಂದೂ ಧರ್ಮದ ಎಲ್ಲೆಯೊಳಕ್ಕೆ ಸೇರಿಸಿಕೊಳ್ಳಬಯಸುವ ಎಲ್ಲ ಶೂದ್ರರು ಮತ್ತು ಅಸ್ಪೃಶ್ಯರು ಮಾಂಸಾಹಾರಿಗಳು ಎಂಬುದನ್ನು ಮರೆಯುತ್ತಿದ್ದಾರೆ.

ಭಾರತದ ಕೋಮುವಾದಿ ರಾಜಕಾರಣದಲ್ಲಿ ಆಹಾರದ ಬಗೆಗಿನ ಇಂಥ ಸಂಕಥನ ಜನತೆಯ ನಂಬಿಕೆಯನ್ನು ಒಡೆಯುವ ಮತ್ತು ಕೆರಳಿಸುವ ಸಾಧನವಾಗಿ ಬಳಕೆಯಾಗುತ್ತಿದೆ. ಹಿಂದುತ್ವವಾದಿಗಳು ರೂಪಿಸಿಕೊಳ್ಳತೊಡಗಿದ ಇಂಥ ಆಹಾರ ಸಂಕಥನಗಳ ಬಗೆಗೆ ಹಾಗೂ ಈ ರೀತಿಯ ಸಿದ್ಧಾಂತಗಳೇ ಹೇಗೆ ಕೋಮುವಾದ ಹಾಗೂ ಅದರ ಕ್ರೌರ್ಯವನ್ನು ತೀವ್ರಗೊಳಿಸುತ್ತವೆ ಎಂಬುದರ ಬಗೆಗೆ ಕನ್ನಡ ಚಿಂತನೆ ಆಳವಾಗಿ ಚರ್ಚಿಸಿದೆ.

ಭಾರತೀಯ ಮನಸ್ಸಿನಲ್ಲಿ ಗೋವು ಪೂಜ್ಯನೀಯವಾಗಿರುವುದಾದರೂ ಏತಕ್ಕೆ? ಭಾರತದ ಸಾಂಪ್ರದಾಯಿಕವಾದ ಹಾಗೂ ಬಹುಪಾಲು ಜನತೆ ಆಶ್ರಯಿಸಿದ್ದ ಕಸುಬು ವ್ಯವಸಾಯ. ಆಧುನಿಕಪೂರ್ವ ಜಗತ್ತಿನಲ್ಲಿ ಕೃಷಿಯನ್ನು ಮುಖ್ಯ ಕಸುಬನ್ನಾಗಿ ಮಾಡಿಕೊಂಡಿದ್ದ ಭಾರತೀಯರು ತಮ್ಮ ಕಸುಬಿಗೆ ಅನುಕೂಲವಾಗುವಂತೆ ಗೋವುಗಳನ್ನು ಹೊಂದಿಸಿಕೊಂಡಿದ್ದರು. ಅಲ್ಲದೆ ಗೋವುಗಳು ಕೊಡುವ ಹಾಲು ಜನತೆಯ ಮುಖ್ಯವಾದ ಆಹಾರವಾಗಿ, ಅದರ ಉಪ ಉತ್ಪನ್ನಗಳಾದ ಮೊಸರು, ಬೆಣ್ಣೆ, ತುಪ್ಪ ಮೌಲ್ಯದಾಯಕವಾಗಿದ್ದವು. ಸಗಣಿಯಂಥ ಗೊಬ್ಬರ ಅವನ ಬೆಳೆಗೆ ಸತ್ವವನ್ನು ಕೊಡುತ್ತಿತ್ತು. ಹೀಗೆ ಉಪಯೋಗಕೇಂದ್ರಿತವಾದ ಗೋವುಗಳಿದ್ದ ಮನೆ ಸಮೃದ್ಧ ಎಂದು ನಂಬಿಕೊಂಡಿದ್ದ ಆ ಮನಸ್ಸುಗಳು ಹಸುವಿನ ಸಗಣಿ ಮತ್ತು ಗಂಜಲವನ್ನು ಶುಚಿತ್ವಕ್ಕೆ ಬಳಸುತ್ತಾ, ಅವನ್ನೂ ಪವಿತ್ರವೆಂದು ನಂಬಿಕೊಂಡಿದ್ದವು. ಬಹು ಮುಖ್ಯವಾಗಿ ಈ ಗೋವು, ಅಸಂಖ್ಯಾತ ಭಾರತೀಯರ ಪೂಜ್ಯನೀಯ ದೈವ ಶಿವನ ವಾಹನ ಎಂಬ ನಂಬಿಕೆಯೂ ಇತ್ತು. ಜನರ ನಂಬಿಕೆಯಲ್ಲಿ ಪ್ರಾಣಿ ಮಾತ್ರವಾಗಿರದೆ ಬಸವ, ಬಸವಣ್ಣನಾಗಿದ್ದ ಈ ಬಹುಪಯೋಗಿ ಮತ್ತು ಸತ್ವಯುತವಾದ ಗೋವನ್ನು ತಮ್ಮ ಪುರೋಹಿತಶಾಹಿಯ ಮೂಲಕ ದಕ್ಕಿಸಿಕೊಂಡುಬಿಡುತ್ತಿದ್ದ ಬ್ರಾಹ್ಮಣರು ಅದನ್ನು ಗೋದಾನವನ್ನಾಗಿ ಪಡೆಯಲಾರಂಭಿಸಿದ್ದರು. ಹೀಗೆ ಕೃಷಿಕನ ದೃಷ್ಟಿಯಲ್ಲಿ ಏಕಕಾಲಕ್ಕೆ ಪ್ರಾಣಿಯೂ, ದೇವರೂ ಆಗಿದ್ದ ಹಸು, ಕೃಷಿಯನ್ನು ತನ್ನ ಕಸುಬನ್ನಾಗಿಯೂ ಮಾಡಿಕೊಳ್ಳದ, ಹಸುವನ್ನು ಪ್ರಾಣಿಯನ್ನಾಗಿಯೂ ಕಾಣಲಾರದ ಬ್ರಾಹ್ಮಣ ಸಮೂಹದಲ್ಲಿ 'ಪವಿತ್ರ'ಗೋವಾಗಿ ನೆಲೆನಿಲ್ಲಲಾರಂಭಿಸಿತು.

ಮಾನವವನನ್ನು ಮಾನವವನನ್ನಾಗಿ ಕಾಣದ ಹಿಂದುತ್ವವಾದಿಗಳು ಬಹುಪಯೋಗಿ ಪ್ರಾಣಿಯನ್ನು 'ಪವಿತ್ರ' ಗೋವು ಎಂದು ಕರೆಯುತ್ತಾ, ಇಂದು ಅದನ್ನೇ ಒಂದು ಪ್ರಧಾನ ಕೋಮುಅಸ್ತ್ರವನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ತಮ್ಮ ಕಾರ್ಯ ನೀತಿಯನ್ನು ಎಲ್ಲರ ಮೇಲೆ ಹೇರಲು ಗೋಹತ್ಯೆ ಕಾನೂನನ್ನು ರಾಷ್ಟ್ರವ್ಯಾಪ್ತಿಯಾಗಿ ಜಾರಿಗೆ ತರಲು ಆಲೋಚಿಸಿದ ಹಿಂದುತ್ವವಾದಿಗಳ ನಾಯಕ ಅಟಲ್ ಬಿಹಾರಿ ವಾಜಪೇಯಿಯವರ ಪ್ರಯತ್ನವನ್ನು ನೆನೆದು ಪೂರ್ಣಚಂದ್ರ ತೇಜಸ್ವಿಯವರು ಹೀಗೊಂದು ವಾಸ್ತವವನ್ನು ಎದುರಾಗಿಸಿದ್ದಾರೆ:

> ಗೋಹತ್ಯೆ ಕಾನೂನನ್ನು ರಾಷ್ಟ್ರವ್ಯಾಪ್ತಿಯಾಗಿ ನಿಜಕ್ಕೂ ಕಟ್ಟನಿಟ್ಟಾಗಿ ವಾಜಪೇಯಿಯವರೇನಾದರೂ ಜಾರಿಗೆ ತಂದರೆ ತತ್‌ಕ್ಷಣವೇ ಬೀದಿಪಾಲಾಗುವ ಅನೇಕ ಲಕ್ಷ ಗೊಡ್ಡು ಹಸುಗಳ ಪಾಡೇನು? ಪ್ರತಿದಿನ ಇದೇ ರೀತಿ ಲಕ್ಷ ಲಕ್ಷ ದನಗಳು ಹೊಸದಾಗಿ ಸೇರ್ಪಡೆಯಾಗುತ್ತಲೇ ಹೋಗುತ್ತವಲ್ಲ, ಇವುಗಳ ಪಾಲನೆ ಪೋಷಣೆಗೆ ತಗಲುವ ವೆಚ್ಚ ಮತ್ತು ಸಿದ್ಧತೆ ಯಾವ ರಾಜ್ಯದಲ್ಲಾದರೂ ಇದೆಯೆ? ನೈರ್ಮಲ್ಯ ಸಮಸ್ಯೆಯನ್ನು ಸಹ ನಾವು ಎದುರಿಸುವುದು ಕಷ್ಟ. ಸರ್ಕಾರಗಳು ಬೀದಿ ನಾಯಿಗಳನ್ನು ಸಹ ನಿಯಂತ್ರಿಸಲಾರದ ಸ್ಥಿತಿಯಲ್ಲಿವೆ. ಪ್ರತಿ ವರ್ಷ ಲಕ್ಷಾಂತರ ಮಂದಿ ಹುಚ್ಚುನಾಯಿ ಕಡಿತದಿಂದ ಸಾಯುತ್ತಿದ್ದಾರೆ. ಇದರೊಡನೆ ಬೀದಿ ದನಗಳೂ ಸೇರ್ಪಡೆಯಾದರೆ ದೇಶದ ರಕ್ಷಣಾ ವೆಚ್ಚವನ್ನೆಲ್ಲಾ ಈ ಗೊಡ್ಡು ಹಸುಗಳಿಗೇ ವಿನಿಯೋಗಿಸಿದರೂ ಸಾಲುವುದಿಲ್ಲ. 'ಗೋ ಬ್ರಾಹ್ಮಣೋ ಸುಖಿನೊ ಭವಂತು' ಎಂಬ ವೇದವಾಕ್ಯ ಬರೆದವನ ಕಾಲಕ್ಕೂ ಇವತ್ತಿನ ಭಾರತಕ್ಕೂ ಇರುವ ಅಗಾಧ ವ್ಯತ್ಯಾಸ ಸಾಧುಸಂಸತ್ತಿಗೆ ಇಲ್ಲದಿರಬಹುದು. ಆದರೆ ಈ ದೇಶದ ಪ್ರಧಾನಿಗೂ ಇಲ್ಲದಿದ್ದರೆ ತುಂಬ ಕಷ್ಟ. ವೇದಕಾಲದಲ್ಲಿದ್ದ ವಿರಳವಾದ ಜನಸಂಖ್ಯೆ, ಅಗಾಧ ಗೋಮಾಳಗಳು, ವಿಸ್ತಾರವಾದ ಕಾಡು, ಕಾಡಿಗಟ್ಟಿದ ಗೊಡ್ಡು ಗೋವುಗಳನ್ನು ತಿನ್ನಲು ಇದ್ದ ಮಾಸಾಹಾರಿ ವನ್ಯಮೃಗಗಳು ಇವೆಲ್ಲಾ ಭಾರತದಲ್ಲಿ ಇಂದು ಅಕ್ಷರಶಃ ಅಂತರ್ಧಾನವಾಗಿವೆ.[೧]

ತಮ್ಮ ನಿತ್ಯ ಬದುಕಿನಲ್ಲೇ ನೂರಾರು ಜಂಜಾಟಗಳನ್ನು ತುಂಬಿಕೊಂಡು ನಲುಗಿಹೋಗುತ್ತಿರುವ ಸಾಮಾನ್ಯ ಜನರಲ್ಲಿ ಕೋಮುವಾದಿಗಳು, ಕೋಮು ಭಾವನೆಗಳನ್ನು ಎಚ್ಚರಿಸಲು ಮುಗ್ಧ ಮನಸ್ಥಿತಿಗಳಲ್ಲಿ ಮತೀಯ ವಿಚಾರಗಳನ್ನು ತುಂಬಲು ದಾರಿಗಳನ್ನು ಹುಡುಕುತ್ತಿರುತ್ತಾರೆ. ಇಂಥ ವಿಕೃತ ಮಾರ್ಗಗಳ ಅನ್ವೇಷಣೆಯಲ್ಲಿರುವ ಹಿಂದೂ ಮತಾಂಧರಿಗೆ ದೊರೆತ ಬಹುಸೂಕ್ಷ್ಮ ಮಾರ್ಗ ಅಥವಾ ಸಾಧನ ಈ ಗೋಮಾಂಸದ ಸಿದ್ಧಾಂತ.

ಮೇಲ್ಜಾತಿ ಹಿಂದೂಗಳು ಅದನ್ನು ಬಳಸದೆ ಇರುವುದು ಹಾಗೂ ಮುಸ್ಲಿಮರು ಅದನ್ನು ಸೇವಿಸುವುದೇ ಈ ವಿವಾದವನ್ನು ಹುಟ್ಟು ಹಾಕಲು ಕಾರಣ. ಆದರೆ ಶ್ರಾದ್ಧವನ್ನು ಮಾಡುವಾಗ ಯಾವ ಯಾವ ಜೀವಿಗಳ ಮಾಂಸವನ್ನು ತಿಂದರೆ ಸತ್ತ ಆತ್ಮಕ್ಕೆ ಎಷ್ಟೆಷ್ಟು ಶಾಂತಿ ಸಿಗುತ್ತದೆ ಎಂಬುದಾಗಿ ವೈದಿಕರು ನಂಬಿದ್ದರು ಎಂಬುದನ್ನು ಪ್ರೊ.ಎಂ.ಡಿ. ನಂಜುಂಡಸ್ವಾಮಿ ಮನುಧರ್ಮಶಾಸ್ತ್ರದ ಕೆಲವು ಶ್ಲೋಕಗಳ ಮೂಲಕ ಅಸೆಂಬ್ಲಿಯಲ್ಲೊಮ್ಮೆ ಹೀಗೆ ವಿವರಿಸಿದ್ದಾರೆ:

> ಆಮೆ ಮತ್ತು ಮೀನು ತಿಂದರೆ ಎರಡು ತಿಂಗಳು ಆತ್ಮಕ್ಕೆ ಶಾಂತಿ ಸಿಗುತ್ತದೆ. (ಮೂರನೇ ಅಧ್ಯಾಯ, ೨೬೮ನೇ ಶ್ಲೋಕ) ಜಿಂಕೆ ತಿಂದರೆ ಮೂರು ತಿಂಗಳು ಆತ್ಮಕ್ಕೆ ಶಾಂತಿ ಸಿಗುತ್ತದೆ. ಕುರಿ ತಿಂದರೆ ನಾಲ್ಕು ತಿಂಗಳು ಆತ್ಮಕ್ಕೆ ಶಾಂತಿ ಸಿಗುತ್ತದೆ. ಪಕ್ಷಿಗಳನ್ನು ತಿಂದರೆ ಆತ್ಮಕ್ಕೆ ಐದು ತಿಂಗಳು ಶಾಂತಿ ಸಿಗುತ್ತದೆ. ಮೇಕೆ ತಿಂದರೆ ಆತ್ಮಕ್ಕೆ ಆರು ತಿಂಗಳು ಶಾಂತಿ ಸಿಗುತ್ತದೆ. (ಮೂರನೇ ಅಧ್ಯಾಯ, ೨೬೯ನೇ ಶ್ಲೋಕ). ಚುಕ್ಕೆ ಇರುವಂಥ ಜಿಂಕೆ ತಿಂದರೆ ಏಳು ತಿಂಗಳು ಶಾಂತಿ ಸಿಗುತ್ತದೆ. ಗೆರೆ ಇರುವ ಜಿಂಕೆ ತಿಂದರೆ ಎಂಟು ತಿಂಗಳು ಶಾಂತಿ ಸಿಗುತ್ತದೆ. ಕೊಂಬು ಇರುವ ಜಿಂಕೆ ತಿಂದರೆ ಒಂಬತ್ತು ತಿಂಗಳು ಶಾಂತಿ ಸಿಗುತ್ತದೆ. (ಮೂರನೇ ಅಧ್ಯಾಯ, ೨೬೯ನೇ ಶ್ಲೋಕ) ಮುಳ್ಳುಹಂದಿ ಮತ್ತು ಕಾಡುಕೋಣವನ್ನು ತಿಂದರೆ ಹತ್ತು ತಿಂಗಳು ಆತ್ಮಕ್ಕೆ ಶಾಂತಿ ಸಿಗುತ್ತದೆ. (ಮೂರನೇ ಅಧ್ಯಾಯ, ೨೭೦ನೇ ಶ್ಲೋಕ). ಆಮೆ ಮತ್ತು ಮೊಲವನ್ನು ಒಟ್ಟಿಗೆ ತಿಂದರೆ ಹನ್ನೊಂದು ತಿಂಗಳು ಶಾಂತಿ ಸಿಗುತ್ತದೆ. ಅಮೃತ ಎನ್ನುವ ವಿಶೇಷ ಮೀನನ್ನು ತಿಂದರೆ ಎಲ್ಲ ಕಾಲಕ್ಕೂ ಶಾಂತಿ ಸಿಗುತ್ತದೆ.[೨]

ಇಂದು ಸಸ್ಯಾಹಾರವೇ ಶ್ರೇಷ್ಠ ಅನ್ನುವ ಆಹಾರ ಸಂಕಥನದ ಮೂಲದ ರಾಜಕೀಯ ಮಾಡಲಾರಂಭಿಸಿರುವ ಬ್ರಾಹ್ಮಣರೂ ಒಂದು ಕಾಲದಲ್ಲಿ ಮಾಂಸಾಹಾರಿಗಳಾಗಿದ್ದರು. ಮದ್ಯಪಾನ ಮಾಡುತ್ತಿದ್ದರು ಎಂಬುದಕ್ಕೆ ಹಲವು ದಾಖಲೆಗಳಿವೆ. ಹಲವು ಸಾಹಿತ್ಯ ಕೃತಿಗಳೂ ಇದನ್ನು ದಾಖಲಿಸಿವೆ. ಕ್ರಿ.ಶ. ೧೨೨೫ರಲ್ಲಿ ಬರೆಯಲಾದ ಜನ್ನನ 'ಯಶೋಧರ ಚರಿತೆ'ಯಲ್ಲಿ ನಾಯಿ ಮುಟ್ಟಿ ದೋಷಪಡಿಸಿದ ಮಾಂಸವನ್ನು ಶುದ್ಧೀಕರಿಸುವುದು ಹೇಗೆ ಎಂಬುದನ್ನು ವೇದದಲ್ಲಿ ದಾಖಲಾಗಿರುವಂತೆ ಪುರೋಹಿತರು ತಿಳಿಸುತ್ತಾರೆ. ಅದರಂತೆ ಮತ್ತೊಂದು ಹೋತವನ್ನು ಕೊಂದು, ದೋಷಗೊಂಡಿದ್ದ ಮಾಂಸವನ್ನು ಶುದ್ಧೀಕರಿಸಿ ಉಂಡು ತೃಪ್ತರಾಗುತ್ತಾರೆ.[೩]

ಹೀಗೆ ಒಂದು ಕಾಲದಲ್ಲಿ ಮಾಂಸಾಹಾರ ಮಾಡುತ್ತಿದ್ದ ಹಿಂದುತ್ವವಾದಿಗಳು, ಹಸುವು ಇಂದು ಕೂಡ ಮತ್ತೊಂದು ಪಂಗಡದ ಸಹಜ ಆಹಾರ ಎಂಬುದನ್ನು ಮರೆಯುತ್ತಿದ್ದಾರೆ. ಹಸು ಪೂಜ್ಯನೀಯವಾದರೆ ಬೇರೆ ಬೇರೆ ಪ್ರಾಂತ್ಯದ, ಜನ ಸಮುದಾಯಕ್ಕೆ ಮತ್ತೆ ಕೆಲವು ಪ್ರಾಣಿಗಳು ಪೂಜ್ಯನೀಯವಾಗಿ ಮತ್ತು ಅನಿಷ್ಟವಾಗಿ ಕಾಣುವ ಹಲವು ನಂಬಿಕೆಗಳು ಇವೆ. ಗೋವನ್ನು ತಿನ್ನುವ ಮುಸ್ಲಿಮರು ಹಂದಿಯನ್ನು ಅನಿಷ್ಟವೆಂದು ಭಾವಿಸಿದರೆ, ಗೋವನ್ನು ತಿನ್ನದ ಹಲವು ಶೂದ್ರರು ಹಂದಿಯನ್ನು ಖುಷಿಯಿಂದ ತಿನ್ನುತ್ತಾರೆ. ಮುಸಲ್ಮಾನರಿಗೆ ಒಂಟೆ ಶ್ರೇಷ್ಠ ಮಾಂಸ ಕೊಡುವ ಪ್ರಾಣಿಯಾದರೆ ಮರುಳುಗಾಡಿನ ಜನತೆಗೆ ಅದು ಪೂಜ್ಯನೀಯವೇ. ಗೂಬೆ ಭಾರತೀಯರಿಗೆ ಅನಿಷ್ಟದ ಸಂಕೇತವಾದರೆ ಯೂರೋಪಿನ ಸಾಹಿತ್ಯದಲ್ಲಿ ವೃದ್ಧ ಮತ್ತು ಕಾಡಿನ ಜ್ಞಾನಿಯಾಗಿ ಕಾಣುತ್ತದೆ. ಹೀಗೆ ಪ್ರಾಣಿಗಳ ಬಗೆಗಿರುವ ಶ್ರೇಷ್ಠ, ಅನಿಷ್ಟದ ನಂಬಿಕೆಗಳು ಪ್ರಾದೇಶಿಕವಾಗಿ ಭಿನ್ನವಾಗಿರುತ್ತವೆ ಎಂಬುದನ್ನು ಹಿಂದೂ ಮತೀಯವಾದಿಗಳು ಯಾಕೆ ಮರೆಯುತ್ತಿದ್ದಾರೆ ಎಂಬುದು ಮುಖ್ಯವಾದ ಪ್ರಶ್ನೆ.

ಹಿಂದುತ್ವವಾದಿಗಳಿಗೆ ಗೋವು ಹೀಗೆ ಭಿನ್ನ ನಂಬಿಕೆಗಳಿಂದ ಪವಿತ್ರಗೊಂಡ ಪ್ರಾಣಿ ಎಂಬುದಕ್ಕಿಂತ ಅದೊಂದು ದೊಡ್ಡ ರಾಜಕೀಯ ಅಸ್ತ್ರ. ಸಸ್ಯಾಹಾರವೇ ಶ್ರೇಷ್ಠ ಅನ್ನುವ ಆಹಾರ ಸಂಕಥನವನ್ನು ಕಟ್ಟುತ್ತಾ ಬರುವ ಹಿಂದುತ್ವವಾದಿಗಳ ರಾಜಕಾರಣದಲ್ಲಿ ಮಾತ್ರ ಇದು ಸಾಧನವಲ್ಲ. ಕ್ರಮೇಣ ದೇಶದ ರಾಜಕೀಯ ವಲಯದ ಒಂದು ಸಂಕಥನವಾಗಿ ರೂಪುಗೊಂಡಿದೆ. ಇದಕ್ಕೆ ಸಾಕ್ಷಿಯೆಂಬಂತೆ, ಹಿಮಾಚಲ ಪ್ರದೇಶದ ಚುನಾವಣಾ ಸಂದರ್ಭದಲ್ಲಿ ವಿರೋಧ ಪಕ್ಷಗಳು ಪ್ರಧಾನಿ ವಾಜಪೇಯಿಯವರು ಗೋಮಾಂಸ ತಿನ್ನುತ್ತಾರೆಂದು, ಅವರ ಅನ್ನಾಹಾರಗಳನ್ನೂ ರಾಜಕೀಯ ಪ್ರಚಾರಕ್ಕೆ ಉಪಯೋಗಿಸಿಕೊಂಡಿರುವುದನ್ನು ತೇಜಸ್ವಿಯವರು ಉಲ್ಲೇಖಿಸುತ್ತಾರೆ.[೪] ಮೇಲ್ಜಾತಿ ಹಿಂದೂಗಳು ಯಾವ ಆಹಾರದ ಅಸ್ತ್ರವನ್ನು ಬಳಸಿ ಜನತೆಯನ್ನು ಕೆರಳಿಸಲು, ಸಂಘಟಿಸಲು, ರಾಜಕೀಯವಾಗಿ ಬೇರೂರಲು ಪ್ರಯತ್ನಿಸಿದ್ದರೋ, ಅದನ್ನೇ ತಿರುಗಿಸಿ ಪ್ರತಿ ಅಸ್ತ್ರವನ್ನಾಗಿ ಮಾರ್ಪಡಿಸಿಕೊಳ್ಳುವ ವಿರೋಧ ಪಕ್ಷಗಳ ಕ್ರಮವನ್ನು ನೋಡಿದರೆ 'ಗೋಮಾಂಸ' ಎಂದು ದನದ ಮಾಂಸವನ್ನು ವೈಭವೀಕರಿಸುವ ಮೂಲಕ ರಾಜಕೀಯ ಲಾಭ ಪಡೆಯುವ ವಿಕೃತಿ ದೇಶದ ಅನೇಕ ರಾಜಕೀಯ ಪಕ್ಷಗಳಲ್ಲೂ ಹಬ್ಬಿರುವುದು ಕಂಡುಬರುತ್ತದೆ.

ಇವತ್ತಿನ ಅಧಿಕಾರ ರಾಜಕಾರಣದ ಮೋಹ ಮತೀಯಭಾವನೆಗಳನ್ನು ಎಷ್ಟರ ಮಟ್ಟಿಗೆ ಬಂಡವಾಳವನ್ನಾಗಿಸಿಕೊಂಡಿದೆ ಎಂದರೆ ರಾಜಕೀಯ ನೆಲೆಗಳಲ್ಲಿ ಕೋಮುವಾದಿ ಚಿಂತನೆಗಳಷ್ಟೇ, ಸೆಕ್ಯುಲರ್ ಎಂಬಂತೆ ಕಾಣಿಸಿಕೊಳ್ಳುವ ಚಿಂತನೆಗಳೂ ಕೊಳೆತುಹೋಗಿವೆ. ಹೀಗೆ ಕೋಮುವಾದಿ ಗುಂಪು ಮತ್ತು ಅದಕ್ಕೆ ಎದುರಾಗಿ ಜಾತ್ಯತೀತರಂತೆ ನಟಿಸುವ ಗುಂಪು– ಈ ಎರಡೂ ಸಮೂಹಗಳ ಅಧಿಕಾರದಾಹವೇ ಆಧುನಿಕ ಭಾರತದಲ್ಲಿ ಮತೀಯವಾದವನ್ನು ತೀವ್ರಗೊಳಿಸಿತು.

**ಕೊನೆ ಟಿಪ್ಪಣಿಗಳು**

೧. ಕೆ.ಪಿ ಪೂರ್ಣಚಂದ್ರ ತೇಜಸ್ವಿ, 'ವಾಜಪೇಯಿ ಮತ್ತು ಗೋರಕ್ಷಣೆ'. ಸಂ: ಬಿಸ್ಲೇಹಳ್ಳಿ ಪ್ರಭು, ಎಚ್. ಆರ್. ಸ್ವಾಮಿ, ಮಾನವತೆಯ ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಪುಟ: ೨೧.

೨. ಪ್ರೊ. ಎಂ.ಡಿ. ನಂಜುಂಡಸ್ವಾಮಿ, 'ಹಿಂದೂ ಅಂದರೆ ಏನು?', ಸಂ: ಬಿಸ್ಲೇಹಳ್ಳಿ ಪ್ರಭು, ಎಚ್. ಆರ್. ಸ್ವಾಮಿ, ಮಾನವತೆಯ ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಪುಟ: ೬

೩. ಜನ್ನಕವಿಯ ಯಶೋಧರ ಚರಿತೆ, ಗದ್ಯಾನುವಾದ: ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ೨೦೦೧, ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು, ಪುಟ: ೫೬-೫೭. (೩ನೇ ಅವತಾರದ ೫೮, ೫೯, ೬೦ನೇ ಪದ್ಯಗಳು).

೪. ಕೆ. ಪಿ. ಪೂರ್ಣಚಂದ್ರ ತೇಜಸ್ವಿ, 'ವಾಜಪೇಯಿ ಮತ್ತು ಗೋರಕ್ಷಣೆ'. ಸಂ: ಬಿಸ್ಲೇಹಳ್ಳಿ ಪ್ರಭು, ಎಚ್.ಆರ್. ಸ್ವಾಮಿ, ಮಾನವತೆಯ ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಪುಟ: ೧೯

## ಅಧ್ಯಾಯ ೬

## ಕೋಮು ಸಂಘರ್ಷಗಳ ದಾರಿ ಮತ್ತು ಗುರಿ

ಕೋಮುವಾದದಿಂದ ಸೃಷ್ಟಿಯಾಗುವ ಗಲಭೆಗಳು, ಅವುಗಳನ್ನು ರೂಪಿಸುವಲ್ಲಿ ಮತೀಯವಾದಿಗಳು ಹುಡುಕುವ ತಂತ್ರಗಳು, ಸಂಘರ್ಷಗಳ ಸ್ವರೂಪ ಮತ್ತು ಪರಿಣಾಮಗಳನ್ನು ಈ ಅಧ್ಯಾಯದಲ್ಲಿ ವಿವರಿಸಿದ್ದೇನೆ. ಈ ಬಗೆಗೆ ಕನ್ನಡ ಚಿಂತಕರು ಗ್ರಹಿಸಿರುವ ಕ್ರಮ ಹಾಗೂ ಕೋಮುಗಲಭೆಗಳ ಸಂದರ್ಭಗಳಲ್ಲಿ ತಯಾರಿಸಿರುವ ವರದಿಗಳಲ್ಲಿ ದಾಖಲಾಗಿರುವ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ.

ಒಂದು ನಿರ್ದಿಷ್ಟ ಸಮಾಜದ ಜನತೆ ತನ್ನ ಬದುಕಿನಲ್ಲಿ ಹಲವು ಅತೃಪ್ತಿಗಳನ್ನು ತಳೆದಿರುತ್ತದೆ. ತನ್ನ ಈ ಅತೃಪ್ತಿ, ಅಸಮಾಧಾನಗಳಿಗೆ ಯಾರನ್ನೋ ಕಾರಣ ಎಂದು ಭ್ರಮಿಸಿರುತ್ತದೆ. ತಾನು ಸೋತಂತಾಗಿ, ತನಗಿಂತ ಮುನ್ನಡೆಯುತ್ತಿರುವವರನ್ನು ದ್ವೇಷಿಸಲಾರಂಭಿಸುತ್ತದೆ. ಈ ಅತೃಪ್ತಿಯು ಹೊಮ್ಮಲು ಒಂದು ಸರಿಯಾದ ಸಮಯಕ್ಕೆ ಕಾದು ನಿಂತಿರುತ್ತದೆ. ಇದು ಹೊರಕ್ಕೆ ಜಿಗಿಯಲು ತನ್ನ ಸಾಮಾಜಿಕ ವಲಯದಲ್ಲಿ ಒಂದು ಗೊಂದಲ, ಅವ್ಯವಸ್ಥೆ, ಅರಾಜಕತೆಯನ್ನು ಬಯಸುತ್ತಾ, ಅದನ್ನು ಸೃಷ್ಟಿಸಲು ಪ್ರಯತ್ನಿಸುತ್ತದೆ. ಎಲ್ಲ ಕೋಮುವಾದಿ ಸಂಘರ್ಷಗಳಲ್ಲೂ ಇರುವ ಅತೃಪ್ತಿ ಇದೇ ತೆರನಾದದ್ದು. ತನ್ನ ಹಿನ್ನಡೆಗೆ ನಿರ್ದಿಷ್ಟ ಪಂಗಡವೇ ಕಾರಣ, ಅಥವಾ ಯಾರನ್ನೊ ಮೀರಿ, ಇನ್ಯಾರೋ ಮುಂದುವರಿಯುತ್ತಾರೆಂಬ ಭಯ ಮತ್ತು ಅಸಮಾಧಾನದಿಂದ ಪಾರಾಗಲು, ಆ ಕಾರಣಿಗರನ್ನು ತುಳಿಯಲು ನಿರ್ಮಿಸಿಕೊಳ್ಳುವ ಅರಾಜಕ ಸಂದರ್ಭವೇ ಕೋಮುಸಂಘರ್ಷಗಳ ತಾಯಿ ಮಡಿಲು. ಇಂದು, ಇವನು ಮುಸ್ಲಿಂ ಎಂದು ಅರಿತ ಬಳಿಕ ಮತ್ತೊಂದು ಜನಸಮುದಾಯ ಅವರ ಬಗೆಗೆ ಹಗೆ ಮತ್ತು ತಿರಸ್ಕಾರವನ್ನು ಪ್ರಯತ್ನಪೂರ್ವಕವಾಗಿ ರೂಪಿಸಿಕೊಳ್ಳುವುದಿಲ್ಲ. ಕೆ.ವಿ. ಸುಬ್ಬಣ್ಣನವರು 'ಗುಜರಾತ್ ಸ್ವಗತ' ಎಂಬ ತಮ್ಮದೊಂದು ಲೇಖನದಲ್ಲಿ ಹೇಳುವಂತೆ ನಮ್ಮ ಆಳದಲ್ಲೇ ಮುಸ್ಲಿಮರ ಬಗೆಗೆ ಒಂದು ತೆರನಾದ ಸಂಶಯ ಕುಳಿತುಬಿಟ್ಟಿದೆ.[೧] ಈ ಸಂಶಯದ ಕಾರಣಕ್ಕಾಗಿ ಮುಸ್ಲಿಮರ ಪ್ರತಿ ನಡವಳಿಕೆಯನ್ನು ಮತೀಯವಾದಿ ಹಿಂದೂ ಮನಸ್ಸು ಅನುಮಾನಿಸತೊಡಗುತ್ತದೆ. ಹಾಗಾಗಿ ಕೋಮು ಘರ್ಷಣೆಗಳು ಹಿಂದೂ-ಮುಸಲ್ಮಾನರ ಮನಸ್ಸಿನಲ್ಲಿ ಬಹುಕಾಲಗಳಿಂದ

ರೂಪುಪಡೆದು ಸುಪ್ತವಾಗಿ ಅವಿತಿರುವ ನಕಾರಾತ್ಮಕ ಆಲೋಚನೆಗಳ ಸ್ಫೋಟಗಳೇ. ಸದ್ಯದ ಯಾವುದೋ ಲೆಕ್ಕಕ್ಕೆ ಬಾರದ ಅಂಶವೊಂದು ಈ ಪೂರ್ವಗ್ರಹಕೇಂದ್ರಿತ ಆಲೋಚನೆಗಳಿಂದ ಕಾದು ಕಣಿಕಣಿಗುಟ್ಟುವ ಮನಸ್ಥಿತಿಗೆ ಚಕಮಕಿ ಕಲ್ಲಿನಂತೆ ಒದಗಿಬರುತ್ತದೆ. ಈ ಕೋಮುವಾದಿ ನೋಟಕ್ರಮ ಭಾರತೀಯರ ಪ್ರತಿಕ್ಷಣದ ಆಲೋಚನೆಯಲ್ಲೂ ಹೊಮ್ಮುತ್ತಿರುತ್ತದೆ. ತಾವು ಓದುತ್ತಿದ್ದ ಕಾಲದಲ್ಲಿ ತಮ್ಮ ಜಿಲ್ಲೆಯಲ್ಲಾದ ಕೋಮುಹಿಂಸೆಯನ್ನು ನೆನೆದು ಸುಬ್ಬಣ್ಣ ಅದೇ ಲೇಖನದಲ್ಲಿ ಹೀಗೆ ಬರೆಯುತ್ತಾರೆ : 'ಈಚಿನ ಐವತ್ತು ವರ್ಷಗಳಲ್ಲಿ ಅದನ್ನು ಹೋಲುವ ನಾಲ್ಕಾರು ಹಿಂಸಾ ಪ್ರಕರಣಗಳು ನಡೆದಿವೆ, ಕಥೆಗಳೂ ಹಿಂಬಾಲಿಸಿವೆ. ಇವೆಲ್ಲ ಸಮಾಜದ ದುಷ್ಟ ಕಿಡಿಗೇಡಿ ಕೈಗಳಿಂದ ನಡೆದವು ಅಂತ, ನಾನೀಗ ಅಷ್ಟು ಸುಲಭವಾಗಿ ನಂಬಿಕೊಳ್ಳಲಾರೆ. ಜಿಲ್ಲೆಯ ಎರಡೂ ಕೋಮುಗಳ ಒಬ್ಬೊಬ್ಬನೂ ತನ್ನ ತನ್ನ ಯಥಾಶಕ್ತಿ ಕಿರುಕಾಣಿಕೆಗಳನ್ನು ಕೊಟ್ಟಿರಲೇಬೇಕು ಇದಕ್ಕೆ.....ಸ್ವತಃ ನಾನು ಕೂಡ'.[೨]

ಹೀಗೆ ಮತೀಯವಾದ ನಮ್ಮ ಜೀವನ ಗತಿಯಲ್ಲೇ, ದೈನಂದಿನ ಆಲೋಚನಾ ಕ್ರಮಗಳಲ್ಲೇ ಸೂಕ್ಷ್ಮರೂಪಿಯಾಗಿ ಹೇಗೆ ನಿರ್ಮಾಣವಾಗುತ್ತದೆಂಬುದನ್ನು ಕಂಡರೆ ನಮ್ಮ ಆಳದಲ್ಲೇ ಅಡಗಿ ಕುಳಿತಿರುವ ನೋಟಕ್ರಮಗಳ ಬಗೆಗೆ ದಿಗ್ಭ್ರಮೆಯಾಗುತ್ತದೆ. ಇಷ್ಟೇ ಸಾಲದೆಂಬಂತೆ ಸಮಕಾಲೀನ ಕೋಮುವಾದಿ ರಾಜಕೀಯ ಚಿಂತನೆಗಳು, ಒಂದು ರಾಜಕೀಯ ಚಿಂತನೆಯಾಗಿ ಕೋಮುಭಾವನೆಗಳನ್ನು ತುಂಬುತ್ತಾ ಮನಸ್ಸುಗಳನ್ನು ಮತ್ತಷ್ಟು ವಿಕಾರಗೊಳಿಸುತ್ತಿವೆ.

ಎಲ್ಲ ಕೋಮು ಗಲಭೆಗಳು ಕೂಡ ನೆಪವನ್ನು ಹುಡುಕಿಕೊಂಡು, ಈಗಾಗಲೇ ತುಂಬಿತುಳುಕುತ್ತಿರುವ ಆಕ್ರೋಶ, ಅತೃಪ್ತಿಗಳನ್ನು ಹೊರಗೆ ಚೆಲ್ಲುತ್ತವೆ ಎಂಬುದನ್ನು ಕೋಮು ಸಾಮರಸ್ಯಕ್ಕಾಗಿ ಹಾತೊರೆಯುತ್ತಾ, ಕೋಮುವಾದದ ಬಗೆಗೆ ವಿಶೇಷವಾದ ಅಧ್ಯಯನ ಮಾಡುತ್ತಿರುವ ಜಿ. ರಾಜಶೇಖರ, ಕೆ. ಫಣಿರಾಜ್ ಹಾಗೂ ಪಟ್ಟಾಭಿರಾಮ ಸೋಮಯಾಜಿಯವರು ಕೋಮುಗಲಭೆಗಳ ಬಗೆಗೆ ತಯಾರಿಸಿರುವ ವರದಿಗಳು ಗಾಢವಾಗಿ ಕಣ್ಣಿಗೆ ರಾಚುತ್ತಿವೆ. 'ಲಂಕೇಶ್ ಪತ್ರಿಕೆ'ಯಲ್ಲಿ ದಾಖಲಾಗಿರುವ ತುಮಕೂರು, ಚನ್ನಪಟ್ಟಣ, ಕೋಲಾರ, ಕೊಡಗು, ಹುಬ್ಬಳ್ಳಿ, ಬೆಳ್ತಂಗಡಿ, ಸಕಲೇಶಪುರ, ಸುಳ್ಯ ಮೊದಲಾದ ಕಡೆಗಳಲ್ಲಾದ ಕೋಮುಗಲಭೆಗಳ ವಿವರಗಳೂ ಅದನ್ನೂ ದಾಖಲಿಸಿವೆ.[೩]

ಮತೀಯವಾದಿಗಳು ಹುಡುಕಲೆತ್ನಿಸುವ ನೆಪಗಳು ನಿಜವಾದ ಕಾರಣಗಳೇ ಅಲ್ಲ. ಯಾವುದೋ ಕೋಮಿನ ಹುಡುಗ, ಇನ್ಯಾವುದೋ ಕೋಮಿನ ಹುಡುಗಿಯನ್ನು ಚುಡಾಯಿಸುವುದು, ಹಿಂದೂಮತೀಯವಾದಿಗಳು 'ಪರಮ ಪೂಜ್ಯ' ಅಂದುಕೊಂಡಿರುವ ದನವನ್ನು ಮುಸ್ಲಿಮನೊಬ್ಬ ಹೊಡೆಯುವುದು, ಅಥವಾ ಸುಮ್ಮನೆ ಹಿಡಿದು ನಡೆಯುವುದು, ಹಬ್ಬ ಉತ್ಸವಗಳಲ್ಲಿ ಜೋರಾಗಿ ತಮಟೆ ಹೊಡೆದು ಕುಣಿಯುವುದು, ಮಾರುಕಟ್ಟೆಯಲ್ಲಾದ

ಚೌಕಾಸಿ, ಭೂ ವಿವಾದ, ನಲ್ಲಿಯ ಬಳಿ ನೀರು ಹಿಡಿಯುವಾಗ ಹುಟ್ಟಿದ ಮನಸ್ತಾಪ-ಇವೆಲ್ಲ ಮತೀಯವಾದಿಗಳ ಅತೃಪ್ತಿಗಳನ್ನು ಬೀದಿಗೆ ತಂದುಬಿಡುತ್ತವೆ. ಹಿಂದೂ ಹುಡುಗಿಯೊಬ್ಬಳನ್ನು ಮುಸಿಲ್ಲಿ ತರುಣನೊಬ್ಬ ಮಾತಾಡಿಸಿದ, ಕಣ್ಸನ್ನೆ ಮಾಡಿದ ಎಂದು ರಕ್ತ ಹರಿಸುವ ಹಿಂದುತ್ವವಾದಿಗಳಿದ್ದಾರೆ. ಹಿಂದೂಗಳಲ್ಲೇ ದಿನ ನಡೆಯುವ ಅತ್ಯಾಚಾರ, ಅಪ್ರಾಪ್ತ ಬಾಲಕಿಯರು ಹಾಗೂ ಎರಡು-ಮೂರು ವರ್ಷದ ಮಕ್ಕಳ ಮೇಲಾಗುವ ಲೈಂಗಿಕ ದೌರ್ಜನ್ಯಗಳು ಇವರ ಮತೀಯವಾದಿ ಮೆಳ್ಳಗಣ್ಣಿಗೆ ಕಾಣಿಸುವುದೇ ಇಲ್ಲ. ಬ್ರಾಹ್ಮಣ ಹತ್ಯೆ ಮತ್ತು ಗೋಹತ್ಯೆ ಪಾಪಗಳೆಂದು ಸಾಂಸ್ಕೃತಿಕ ಸಂಕಥನಗಳನ್ನು ನಿರ್ಮಿಸಿ, ತನ್ನ ಮತ್ತು ತನ್ನ ಸಮೃದ್ಧತೆಯನ್ನು ಕಾಯ್ದುಕೊಳ್ಳುವ ಹಾಲುಕರೆವ ಹಸುವನ್ನು ಸಂರಕ್ಷಿಸಿಕೊಳ್ಳುತ್ತಿದ್ದ ಪುರೋಹಿತಶಾಹಿ ಆ ಸಂಕಥನವನ್ನೇ ತನ್ನ ಇಂದಿನ ಮತೀಯವಾದಿ ಆಕ್ರಮಣಗಳಿಗೆ ಅಸ್ತ್ರಮಾಡಿಕೊಳ್ಳುತ್ತಿದೆ.

ದನದ ಕಾರಣಕ್ಕಾಗೇ ಜನಸತ್ತ ಗಲಭೆಗಳು ಜರುಗಿಹೋಗಿವೆ. ಹಿಂದೂ ಮತೀಯವಾದಿಗಳಿಗೆ ಗೋವು ಹುಸಿ ಪ್ರೀತಿಯ ನೆಪವಾಗಿದೆ. ಜಿ. ರಾಜಶೇಖರ್ ಮತ್ತು ಕೆ. ಫಣಿರಾಜ್ ಅವರು ಕಂಡಂತೆ ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಬಲವಾಗಿ ಬೇರೂರಿರುವ ಹಿಂದೂ ಕೋಮು ಸಂಘಟನೆಗಳು ಗೋವಿನ ನೆಪದಲ್ಲಿ ಮತ್ತೆ ಮತ್ತೆ ಗಲಭೆ ನಡೆಸುತ್ತಾ ಬಂದಿವೆ. ಗೋವಿಗೆ ಸಂಬಂಧಿಸಿದಂತೆ ೨೦೦೫ ಮಾರ್ಚ್ ೧೩ ರಂದು ಆದಿ ಉಡುಪಿಯಲ್ಲಿ ನಡೆದ ಒಂದು ಅಮಾನುಷ ಘಟನೆಯನ್ನು ಇವರಿಬ್ಬರು ದಾಖಲಿಸಿದ್ದಾರೆ.[೪] ಹಾಜಬ್ಬ ಮತ್ತು ಹಸನಬ್ಬ ಎಂಬ ತಂದೆ ಮಗ ಇಬ್ಬರು ದನದ ದಲ್ಲಾಳಿಗಳು. ಅಂದು ಅವರು ಎಂದಿನಂತೆ ವ್ಯಾಪಾರಕ್ಕೆಂದು ದನಗಳನ್ನು ಹಿಡಿದುಕೊಂಡು ಹೋಗುವಾಗ ಅಲ್ಲಿನ 'ಹಿಂದೂ ಯುವಸೇನೆ'ಯ ವೀರರು ಅವರನ್ನು ಬೆತ್ತಲೆಗೊಳಿಸಿ ಹೊಡೆದರು. ದನಗಳ ಕಳ್ಳಸಾಗಣೆಯಲ್ಲಿ ತೊಡಗಿದ್ದರೆಂಬುದು ಆ ವೀರರ ವಿವರಣೆ. ಹಾಜಬ್ಬ, ಹಸನಬ್ಬರಿಬ್ಬರೂ ಬಡದಲ್ಲಾಳಿಗಳಷ್ಟೇ. ಮುಸ್ಲಿಮರ ಕೈಯಲ್ಲಿ ಹಸುಗಳನ್ನು ಕಂಡರೆ ಸಾಕು ಅವುಗಳನ್ನು ಕಸಾಯಿಖಾನೆಗೆ ಕರೆದೊಯ್ಯುತ್ತಿದ್ದಾರೆ ಎಂಬುದು ಹಿಂದೂ ಕೋಮುವಾದಿಗಳ ಪೂರ್ವಗ್ರಹ.

'೧೯೬೮ ರಲ್ಲಿ ಔರಂಗಾಬಾದ್ ನಗರವನ್ನು ನಡುಗಿಸಿದ ಗಲಭೆಗೆ ಹಸುವೊಂದು ನಿಮಿತ್ತವಾಗಿತ್ತು. ರೊಟ್ಟಿ ಅಂಗಡಿಯೊಂದರ ಮಾಲಿಕನಾಗಿದ್ದ ಮುಸ್ಲಿಮನೊಬ್ಬ ತನ್ನ ಅಂಗಡಿಯೊಳಗೆ ನುಗ್ಗಿದ್ದ ಆ ಹಸುವನ್ನು ರೊಟ್ಟಿ ಕತ್ತರಿಸುವ ಕತ್ತಿಯ ಹಿಮ್ಮೈಯಿಂದ ಹೊಡೆದಿದ್ದ. ಹಸುವಿಗೆ ಕೊಂಚ ಗಾಯವಾಗಿ ಅದರ ಬೆನ್ನ ಮೇಲೆ ಸ್ವಲ್ಪ ರಕ್ತ ಜಿನುಗತೊಡಗಿತ್ತು. ಹೀಗಾಗಿ ಬೀದಿಯಲ್ಲಿ ಆಡ್ಡಾಡುತ್ತಿದ್ದ ಬಡ ಹಸುವೊಂದನ್ನು ಮುಸ್ಲಿಮನೊಬ್ಬ ನಡು ಹಗಲಿನಲ್ಲೇ ವಿನಾಕಾರಣ ತಲೆ ಕಡಿದು ಕೊಂದನೆಂಬ ಸುಳ್ಳು ಸುದ್ದಿ ತಕ್ಷಣ ನಗರದಲ್ಲಿ ಹರಡಿ, ಅದರ ಪರಿಣಾಮವಾಗಿ ಎರಡು ಮೂರು ದಿನಗಳ ಕಾಲ ಮತೀಯ ಹಿಂಸಾಕಾಂಡಕ್ಕೆ ಔರಂಗಾಬಾದ್ ಬಲಿಯಾಗಿತ್ತು'.[೫] ಸಾಹಿತ್ಯ

ಸಲ್ಲಾಪವೆಂಬುದೇನಾದರೂ ಇದ್ದಿದ್ದರೆ ಈ ಜನಕ್ಕೆ 'ಬರ' ಎಂಬ ಶರಶ್ಚಂದ್ರರ ಒಂದು ಸಣ್ಣ ಕತೆಯ ಪರಿಚಯವಿರುತ್ತಿತ್ತು. ಮತ್ತು ಗಫೂರ್ ಎಂಬ ಒಬ್ಬ ಮುಸಲ್ಮಾನನು ತನ್ನ ಮಹೇಶ್ ಎಂಬ ಗೋವಿನ ಬಗ್ಗೆ ಎಂತಹ ಅದ್ಭುತ ಆತ್ಮೀಯತೆ ಸಾಧಿಸಿಕೊಂಡಿದ್ದನೆಂಬುದರ ಅರಿವಿರುತ್ತಿತ್ತು. ಆದರೆ ಸಾಹಿತ್ಯ-ಸಂಸ್ಕೃತಿಗಳ ಬಗ್ಗೆ ಶುದ್ಧ ಶುಂಠರಾದವರಿಗೆ ಮಾನವ ಹೃದಯವೂ ಗೊತ್ತಿರುವುದಿಲ್ಲ, ಗೋವಿನ ಹೃದಯವೂ ತಿಳಿದಿರುವುದಿಲ್ಲ".[೬]

ಚಿಕ್ಕದೊಂದು ಪ್ರಾರ್ಥನಾ ಮಂದಿರ, ಅರಳಿ ಕಟ್ಟೆ, ರಸ್ತೆಗೆ ಹೆಸರಿಡುವ ಸಂದರ್ಭ, ಅರಿಯದ ಮಕ್ಕಳ ಆಟದ ನಡುವಿನ ಚಿಕ್ಕ ಪುಟ್ಟ ಜಗಳಗಳನ್ನೇ ರಣರಂಪ ಮಾಡುವ ಕೋಮುವಾದಿಗಳಿಗೆ ಜಾತ್ರೆ, ಹಬ್ಬ, ಮೆರವಣಿಗೆಗಳೆಂದರೆ ದೊಡ್ಡ ಹಬ್ಬ. ಇಂಥ ಸಂದರ್ಭಗಳಲ್ಲಿ ಅರಾಜಕತೆಯನ್ನು ಸೃಷ್ಟಿಸಿ, ತಮ್ಮ ರಾಕ್ಷಸತನವನ್ನು ಮೆರೆಯಲು ಕಾಯುತ್ತಿರುತ್ತಾರೆ. ಕತ್ತಿ, ತಳವಾರು, ದೊಣ್ಣೆ, ಚೈನು, ಬಲ್ಲು, ಚೂರಿ, ಪೆಟ್ರೋಲ್ ಬಾಂಬುಗಳನ್ನು ಸಿದ್ಧಮಾಡಿಟ್ಟುಕೊಂಡಿರುತ್ತಾರೆಂದರೆ ಅವರ ಪೂರ್ವನಿಯೋಜನೆ ಎಷ್ಟು ಸಮರ್ಪಕವಾಗಿರುತ್ತದೆಂಬುದು ಅರ್ಥವಾದೀತು. ಕೋಮುಗಲಭೆಗಳಲ್ಲಿ ನಡೆಯುವ ಬಡಿದಾಟಗಳಿಗೆ ಕೋಮು ಆಕ್ರೋಶವೇ ಪ್ರಧಾನ ಕಾರಣವಲ್ಲ. ಅರಾಜಕತೆಯನ್ನು ನಿರ್ಮಾಣ ಮಾಡುವುದಷ್ಟೆ ಕೋಮುದ್ವೇಷದ ಅಂತಿಮ ಕೆಲಸ. ನಂತರ ನಡೆವ ಆಕ್ರಮಣಗಳು ಯಾವ ಯಾವುದೋ ಕಾರಣಕ್ಕೆ ಸಂಬಂಧಿಸಿದ್ದು. ವ್ಯಾಪಾರಕ್ಕೊ, ವ್ಯವಹಾರದ ಸಂಬಂಧಕ್ಕೊ, ಹಣಕಾಸಿನ ವೈಷಮ್ಯಕ್ಕೊ ಅಥವಾ ಒಬ್ಬರಿಗೊಬ್ಬರು ಎದುರುಬದುರಾಗಿ ಕಣ್ಣುಕುಕ್ಕುವಂತೆ ಬದುಕುತ್ತಿರುವುದಕ್ಕೊ. ಜನತೆಯ ಅತೃಪ್ತಿ ಅವನನ್ನು ಎಲ್ಲಿಗೆ ಎಳೆದೊಯ್ಯುತ್ತದೆಂಬುದು ಆಶ್ಚರ್ಯವೇ! ಗಣಪತಿ ಉತ್ಸವಗಳಲ್ಲಿ ಹಿಂದೂ ಮತೀಯವಾದಿಗಳು, ಮುಸಲ್ಮಾನರ ಬೀದಿ ಮತ್ತು ಮಸೀದಿಯ ಮುಂದೆಯೇ ಉದ್ದೇಶಪೂರ್ವಕವಾಗಿ ಮೆರವಣಿಗೆ ಮಾಡುವುದು, ಬೇಕೆಂತಲೇ ಅವರ ಎದುರಿಗೆ ಜೋರಾಗಿ ತಮಟೆ ಹೊಡೆದು, ಮೈಕಾಸುರನ ಆರ್ಭಟವನ್ನು ಹೆಚ್ಚಿಸುವುದು; ಹಾಗೆಯೇ ಮುಸ್ಲಿಂ ಮತೀಯವಾದಿಗಳು ತಮ್ಮ ಧರ್ಮದ ಶ್ರೀಮಂತಿಕೆಯನ್ನು ಸ್ಥಾಪಿಸಲು ಅಥವಾ ತೋರಿಸಲು ಇಲ್ಲಸಲ್ಲದ ದಿನಾಚರಣೆಗಳನ್ನು ಹುಡುಕಿ ಮೆರವಣಿಗೆ ಮಾಡುವುದು, ಹಸಿರು ಬಾವುಟ ತೂಗಾಡಿಸುವುದು-ಇವೆಲ್ಲ ಪರಸ್ಪರರನ್ನು ಪ್ರಚೋದಿಸುತ್ತಿವೆ.

## ೬.೧ ಕೋಮುವಾದ ಮತ್ತು ಪ್ರಭುತ್ವ

ಎಲ್ಲ ಕೋಮುಸಂಘರ್ಷಗಳಲ್ಲೂ ತಕ್ಷಣಕ್ಕೆ ಎಲ್ಲರಿಗೂ ಕಾಣುವ ಕಾರಣ ನೆಪ ಮಾತ್ರ ಎಂದು ಈಗಾಗಲೇ ಹೇಳಿದ್ದೇನೆ. ಎಲ್ಲ ಮತೀಯವಾದಿಗಳೂ ಪರಸ್ಪರ ಒಳಗೊಳಗೇ ದ್ವೇಷಾಸೂಯೆಗಳನ್ನು ಗಟ್ಟಿಗೊಳಿಸಿಕೊಳ್ಳುತ್ತಾ, ಆಕ್ರಮಣಕ್ಕೆ 'ಸರಿ'ಯಾದ ನೆಪಕ್ಕಾಗಿ ಕಾಯುತ್ತಾ, ಆಕ್ರಮಣದ ಎಲ್ಲ ದಾರಿ ಮತ್ತು ತಂತ್ರಗಾರಿಕೆಗಳನ್ನು ಕಲಿತುಕೊಳ್ಳುತ್ತಿರುತ್ತಾರೆ. ಈ ಪೂರ್ವತಯಾರಿ ಮತೀಯವಾದಿ ಗುಂಪಿನ ಖಾಸಗಿ ಸಿದ್ಧಾಂತವಾಗಿ ಮಾತ್ರವಲ್ಲದೆ ಜನತಂತ್ರದ ಆಡಳಿತ ವ್ಯವಸ್ಥೆಯಲ್ಲೂ ಸಾಧ್ಯ ಎಂಬುದನ್ನು ಬಿ.ಜೆ.ಪಿ. ಗುಜರಾತಿನಲ್ಲಿ

ಸಾಬೀತುಪಡಿಸಿದೆ. ಪ್ರಭುತ್ವದ ಜೊತೆಗೆ ಮತೀಯವಾದಿ ಚಿಂತನೆಗಳು ಸೇರಿಕೊಂಡರೆ ಎಂಥ ಭೀಕರ ಹಿಂಸೆ ಹುಟ್ಟುತ್ತದೆ ಎಂಬುದಕ್ಕೆ ಸಾಕ್ಷಿಯಾಗಿ ಗುಜರಾತ್ ನಮ್ಮ ಕಣ್ಣೆದುರೇ ಇದೆ. ಗುಜರಾತಿನಲ್ಲಿ ನಡೆದ ದುರಂತವು ಇದ್ದಕ್ಕಿದ್ದಂತೆ ನಡೆದುದಲ್ಲ ಅದು ಸಂಪೂರ್ಣ ಸಜ್ಜುಗೊಂಡ ವಿಕೃತರ ಅಟ್ಟಹಾಸ ಎಂಬುದನ್ನು, ತಮ್ಮ ಕ್ರೌರ್ಯವನ್ನು ಮರೆಯಲು ಯಾವ ರೀತಿ ಸಿದ್ಧವಾಗಿದ್ದರು ಎಂಬುದನ್ನು ಕೆ. ಫಣಿರಾಜ್ ಹೀಗೆ ಗುರುತಿಸಿದ್ದಾರೆ:

> ಗುಜರಾತಿನ ಗೃಹಖಾತೆಯ ಸಚಿವ ಗೋವರ್ಧನ್ ಝಡಾಫಿಯ ಒಂದೇ ವರ್ಷದಲ್ಲಿ ಶೇ. ೯೫ ರಷ್ಟು ಪೊಲೀಸರ ಸ್ಥಾನಗಳನ್ನು ಬದಲಿ ಮಾಡಿದರು. ಅಲ್ಪ ಸಂಖ್ಯಾತ ಪೊಲೀಸ್ ಅಧಿಕಾರಿಗಳನ್ನು ಕಾನೂನು ನಿಯಂತ್ರಣ ವಿಭಾಗದಿಂದ ರಸ್ತೆ ನಿಯಂತ್ರಣ ವಿಭಾಗಕ್ಕೆ ವರ್ಗಾವಣೆ ಮಾಡಲಾಯಿತು. ಇಷ್ಟು ದೊಡ್ಡ ಪ್ರಮಾಣದ ವರ್ಗಾವಣೆಯ ಅರ್ಥವೇನು ಎಂದು ಉನ್ನತ ಪೊಲೀಸ್ ಅಧಿಕಾರಿಗಳಿಗೆ ಹೊಳೆದದ್ದು ಫೆಬ್ರವರಿ ೨೮, ೨೦೦೨ರ ನಂತರವೇ!
>
> ಗೋಧ್ರದ ಘಟನೆ ನಡೆಯುವುದಕ್ಕೆ ಕೆಲವು ತಿಂಗಳುಗಳ ಮುಂಚೆಯೇ ಸಂಘಪರಿವಾರದ ಸಂಘಟನೆಗಳು ಸರಕಾರಿ ಕಛೇರಿಗಳಿಂದ ಮುಸ್ಲಿಮರ ಮನೆ, ಅಂಗಡಿಗಳ ಸಂಪೂರ್ಣ ವಿವರಗಳನ್ನು ಸಂಗ್ರಹಿಸಿದ ವಿಷಯಗಳನ್ನು ಪತ್ರಿಕೆಗಳು ದೃಢಪಡಿಸಿಕೊಂಡು ಪ್ರಕಟಿಸಿವೆ.
>
> ಫೆಬ್ರವರಿ ೨೮ ರಂದು ಗುಜರಾತ್ ಬಂದ್‌ಗೆ ವಿ.ಹಿಂ.ಪ. ಕರೆಕೊಟ್ಟಿತ್ತು. ಹಿಂದಿನ ರಾತ್ರಿ ಸ್ವತಃ ಮುಖ್ಯಮಂತ್ರಿಗಳೇ ಹಿರಿಯ ಪೊಲೀಸ್ ಅಧಿಕಾರಿಗಳನ್ನು ಕರೆದು, ಬಂದ್‌ಗೆ ಯಾವ ರೀತಿಯಲ್ಲೂ ಅಡ್ಡಿಪಡಿಸಕೂಡದು ಎಂದು ನಿರ್ದೇಶನ ನೀಡಿದರು.
>
> ಫೆಬ್ರವರಿ ೨೮ನೇ ತಾರೀಖು: ಗುಜರಾತ್ ಸರಕಾರದ ಮೂವರು ಮಂತ್ರಿಗಳು ಪೊಲೀಸ್ ಕಂಟ್ರೋಲ್ ರೂಮಿನಲ್ಲಿ ಕೂತು, ಪೊಲೀಸರು ಎಲ್ಲಿ ಹೋಗಬೇಕು, ಎಲ್ಲಿ ಹೋಗಕೂಡದು ಎಂದು ದಿನ ಪೂರ್ತಿ ನಿಯಂತ್ರಿಸಿದರು. ತನ್ನ ಪರಿವಾರದೊಟ್ಟಿಗೆ ಜೀವಂತವಾಗಿ ಸುಡಲ್ಪಟ್ಟ ಮಾಜಿ ಕಾಂಗ್ರೆಸ್ ಸಂಸತ್ ಸದಸ್ಯ ಇಸಾನ್ ಜಾಫ್ರಿ, ರಾಜ್ಯದ ಆರೋಗ್ಯ ಮಂತ್ರಿ ಅಶೋಕ್ ಭಟ್ ಮುಕ್ಕಾಂ ಹೂಡಿದ್ದ ಪೊಲೀಸ್ ಕಂಟ್ರೋಲ್ ರೂಮಿಗೆ ಆರು ತಾಸುಗಳ ಕಾಲ ಸತತವಾಗಿ ಫೋನು ಮಾಡಿ ರಕ್ಷಣೆಗೆ ಗೋಗರೆದಿದ್ದರು.

ಬಂದ್‌ಗೆ ಸರಕಾರ ನಡೆಸುತ್ತಿರುವ ಪಕ್ಷವಾದ ಬಿ.ಜೆ.ಪಿ.ಯು ಬೆಂಬಲ ವ್ಯಕ್ತಪಡಿಸಿತು. ಸರಕಾರದ ಹಿರಿಯ ಮಂತ್ರಿಗಳು ಹಾಗೂ ಬಿ.ಜೆ.ಪಿ.ಯ ಶಾಸಕರು ಹಿಂಸೆಯಲ್ಲಿ ತೊಡಗಿದವರ ನೇತೃತ್ವ ವಹಿಸಿದ್ದನ್ನು ಕಣ್ಣಾರೆ ಕಂಡ ನಾಗರಿಕರು ದೃಢಪಡಿಸಿದ್ದಾರೆ. ಕಳೆದ ಆರು ತಿಂಗಳುಗಳಿಂದ ಗುಜರಾತಿನ ಹಳ್ಳಿಗಳಲ್ಲಿ ಭಜರಂಗ ದಳದವರು, ಯಾವ ಅಡ್ಡಿ ಆತಂಕಗಳಿಲ್ಲದೆ, ತಾವು ಹೇಳಿದಂತೆ ಕೇಳಿಕೊಂಡು ಬದುಕಬೇಕು ಎಂದು ಮುಸ್ಲಿಮರನ್ನು ನಿತ್ಯವೂ ಬೆದರಿಸುತ್ತಿದ್ದರು.

ದಾಳಿಕೋರರು ನೂರಾರು ಲಾರಿಗಳಲ್ಲಿ ಗ್ಯಾಸ್ ಸಿಲಿಂಡರ್ ಹಾಗೂ ಪೆಟ್ರೋಲ್ ತುಂಬಿದ ಕ್ಯಾನುಗಳನ್ನು ವ್ಯವಸ್ಥಿತವಾಗಿ ಹೊತ್ತು ತರುತ್ತಿದ್ದರು. ಹಾಗೂ ಸೆಲ್ ಫೋನುಗಳನ್ನು ಬಳಸಿ ದಾಳಿಗಳನ್ನು ವ್ಯವಸ್ಥಿತವಾಗಿ ನಿರ್ದೇಶಿಸುತ್ತಿದ್ದರು.[೬]

### ೬.೨ ಸುಳ್ಳು ಮತ್ತು ಭ್ರಮೆಯ ಸುಳಿಯಲ್ಲಿ

ಕೋಮುವಾದದ ಈ ಫ್ಯಾಸಿಸ್ಟ್ ಐಡಿಯಾಲಜಿಯ ಮೂಲಶಕ್ತಿ ಸುಳ್ಳು ಮತ್ತು ಭ್ರಮೆ. ಇದು ಈಗಾಗಲೇ ವಿವರಿಸಿದಂತೆ ಧರ್ಮ, ರಾಷ್ಟ್ರ ಎಂಬ ಕಲ್ಪಿತ ಸಮುದಾಯಗಳು ಸಂಕಷ್ಟದಲ್ಲಿವೆ ಎಂಬ ಸುಳ್ಳನ್ನು ಬಿತ್ತುತ್ತದೆ. ಒಂದು ನಿರ್ದಿಷ್ಟ ಸಮುದಾಯದ ಜನ ಮತ್ತೊಂದು ಸಮುದಾಯದಿಂದ ನಡುಗಿಹೋಗುತ್ತಿದ್ದಾರೆಂಬ ಭ್ರಮೆಯನ್ನು ನಿರ್ಮಿಸುವ ಇಂಥ ಸುಳ್ಳುಗಳೇ 'ನಿಜ'ಗಳಾಗಿ ಗೋಚರಿಸಿತೊಡಗುತ್ತವೆ. ಈ ನಿಜಗಳನ್ನು ನಂಬುವ ಒಂದು ಸಮುದಾಯದ ಜನತೆ, ಮತ್ತೊಬ್ಬರನ್ನು ಶತ್ರುಗಳನ್ನಾಗಿ ಭ್ರಮಿಸುತ್ತಾ, ಮತೀಯವಾದಿಗಳ ಹುನ್ನಾರದಂತೆ, ಇವರ ಕಾರ್ಯಸಾಧನವಾಗಿ ರೂಪುಗೊಳ್ಳುತ್ತಾರೆ. ಗಲಭೆಯ ಸಂದರ್ಭದಲ್ಲಿಯೂ ಈ ಸುಳ್ಳುಗಳೇ, ದ್ವೇಷ, ಆಕ್ರಮಣಗಳನ್ನು ತೀವ್ರಗೊಳಿಸುತ್ತಿವೆ ಎಂಬುದು ಕೋಮು ಸಂಘರ್ಷಗಳ ಬಗೆಗೆ ದಾಖಲಾಗಿರುವ ವರದಿಗಳಿಂದ ಸಾಬೀತಾಗಿದೆ. ಅಲ್ಲಿ ಯಾರೋ, ಯಾರನ್ನೊ ಕೊಂದರೆಂದೊ, ಹುಡುಗಿಯನ್ನೊ, ಹೆಂಗಸನ್ನೊ ಮಾನಭಂಗ ಮಾಡಿದರೆಂದೊ, ದೇವಸ್ಥಾನಕ್ಕೊ, ಮಸೀದಿಗೊ, ಪ್ರಾರ್ಥನಾ ಮಂದಿರಕ್ಕೊ ಬೆಂಕಿ ಇಟ್ಟರೆಂದೊ ಸುಳ್ಳು ಸಾರುತ್ತಾ ಮತೀಯವಾದಿಗಳು ಹಾಗೇ ಮಾಡಬೇಕೆಂದಿರುವ ತಮ್ಮ ಆಳದ ಹಂಬಲಗಳಿಗೆ ಅವಕಾಶಗಳನ್ನು ಗಿಟ್ಟಿಸಿಕೊಳ್ಳುತ್ತಾರೆ. ಈ ಸುಳ್ಳುಗಳನ್ನು ನಂಬುವ ಈಗಾಗಲೇ ಮತೀಯ ಆಲೋಚನೆಗಳಿಂದ ಕೊಳೆತುಹೋಗಿರುವ ಜನರು ಆಕ್ರಮಣಕ್ಕೆ ಮುಂದಾಗುತ್ತಾ ಸುಳ್ಳುಗಳಲ್ಲಿ ನಡೆದಿರುವ ಘಟನೆಗಳಿಂದ, ತಾವು ಇಂದು ಮಾಡಲೆತ್ನಿಸುತ್ತಿರುವ ಕ್ರೌರ್ಯಗಳಿಗೆ ನ್ಯಾಯಬದ್ಧತೆಯನ್ನು ತಂದುಕೊಳ್ಳುತ್ತಾರೆ.

ತಮ್ಮ ಮತೀಯವಾದಿ ಐಡಿಯಾಲಜಿಯನ್ನು ಗಟ್ಟಿಯಾಗಿ ನೆಲೆಗೊಳಿಸಿಕೊಡಬಲ್ಲ ಚರಿತ್ರೆ, ಸಾಂಸ್ಕೃತಿಕ ನಂಬಿಕೆ, ಪಾರಂಪರಿಕ ಕಟ್ಟಡ, ದೇವರು–ಈ ಎಲ್ಲವುಗಳ ಬಗೆಗೂ ಉದಾರವಾಗಿ ಸುಳ್ಳು ಹೇಳುವ ಇವರಿಗೆ ಸತ್ಯಗಳನ್ನು ಕಾಣುವ ಮನಸ್ಥಿತಿಯೇ ನಾಶವಾಗಿ ಹೋಗಿರುತ್ತದೆ. ಜರ್ಮನಿಯ ಹಿಟ್ಲರ್ ಕೂಡ ಇಂಥ ಸುಳ್ಳುಗಳ ಮೂಲಕವೇ ತನ್ನ ನಾಜಿ ಜಗತ್ತನ್ನು ನಿರ್ಮಿಸಿಕೊಂಡಿದ್ದ. ಹಿಂದೂ ಕೋಮುವಾದಿಗಳು ರಾಮಸೇತುವಿನ ಬಗೆಗೆ ಆಡುತ್ತಿರುವ ಸುಳ್ಳನ್ನು ಕುರಿತು ಬರೆಯುತ್ತಾ ನಟರಾಜ್ ಹುಳಿಯಾರ್ ಹಿಟ್ಲರ್ ಸುಳ್ಳು ಹೇಳುವುದನ್ನೇ ಹೇಗೆ ಒಂದು ಕಲೆಯನ್ನಾಗಿ ಮಾಡಿಕೊಂಡಿದ್ದ ಎಂದು ಬರೆದಿದ್ದಾರೆ. 'ಯಾವ ಬಗೆಯ ಸುಳ್ಳು ಪರಿಣಾಮಕಾರಿ ಎಂಬುದರ ಬಗೆಗೆ ಚಿಂತನೆ ನಡೆಸಿದ್ದ ಹಿಟ್ಲರ್ ಒಮ್ಮೆ ಹೇಳಿದ: ಜನ ಸಮೂಹ ಸಣ್ಣ ಸುಳ್ಳಿಗಿಂತ ದೊಡ್ಡ ಸುಳ್ಳಿಗೆ ಸುಲಭವಾಗಿ ಬಲಿಯಾಗುತ್ತದೆ. ಇದನ್ನು ಹಿಟ್ಲರ್ ತನ್ನ ಕುತಂತ್ರದ ಯೋಜನೆಗಳಿಗೆ ನೆರವಾದ ಸುಳ್ಳುಗಳ ಅನುಭವದ ಮೇಲೆ ಕಂಡುಕೊಂಡಿದ್ದ'.[೮] ಹಿಟ್ಲರನನ್ನು ಅರೆದು ಕುಡಿದಿರುವ ಹಿಂದೂ ಕೋಮುವಾದಿಗಳಿಗೂ ತಾವು ಹೇಳುತ್ತಿರುವುದು ಸುಳ್ಳು ಎಂದೂ, ಯಾವ ಸುಳ್ಳಿನಿಂದ ಎಷ್ಟೆಷ್ಟು ಲಾಭ ಎಂದೂ ತಿಳಿದಿದೆ. ಆದರೆ ಈ ಸತ್ಯ ಗೊತ್ತಿರುವುದು ಮತೀಯವಾದಿ ಐಡಿಯಾಲಜಿಯನ್ನು ಜನರೇಟ್ ಮಾಡುವ ಮೇಲ್ಮಟ್ಟದ ರಾಜಕಾರಣಿ, ಬಂಡವಾಳಶಾಹಿಗಳು, ಮಠೀಯ ನೆಲೆಯವರಿಗೆ ಮಾತ್ರ. ಮತೀಯ ಸಂಘಟನೆಗಳ, ರಾಜಕೀಯ ಪಕ್ಷದ, ಹುಸಿ ಧಾರ್ಮಿಕತನದ ಅಸಂಖ್ಯಾ ಕಾರ್ಯಕರ್ತರು ಈ ಸುಳ್ಳುಗಳನ್ನೇ ಪರಮಸತ್ಯವೆಂದು ನಂಬಿ, ತಳದಲ್ಲಿ ಕ್ರೌರ್ಯವನ್ನು ಮೆರೆಯುತ್ತಾ ಮೇಲಿನ ಅಧಿಕಾರ ರಾಜಕಾರಣಿಗಳಿಗೆ, ಬಂಡವಾಳಶಾಹಿಗಳಿಗೆ ಭದ್ರವಾದ ನೆಲೆಯನ್ನು ನಿರ್ಮಿಸುತ್ತಿದ್ದಾರೆ.

### ೬.೩ ಕೋಮು ಸಂಘರ್ಷ: ಸ್ತ್ರೀಯರು ಹಾಗೂ ಬಡವರು

ಎಲ್ಲ ಕೋಮು ಸಂಘರ್ಷಗಳ ಪ್ರಧಾನ ಗುರಿ ಹಾಗೂ ಬಲಿ ಮಹಿಳೆಯರು ಮತ್ತು ಎಲ್ಲ ಜಾತಿ, ಧರ್ಮದ ಬಡವರು. ಸ್ತ್ರೀಯರನ್ನು ಗ್ರಹಿಸುವ ಬಗೆಗೆ ಕೋಮುವಾದಿಗಳಿರುವ ಸಾಂಪ್ರದಾಯಿಕ ದೃಷ್ಟಿಕೋನ ಸ್ವಲ್ಪವೂ ಬದಲಾಗಿಲ್ಲ. ಇಂದಿಗೂ ಎಲ್ಲ ಕೋಮುವಾದಿಗಳು ಮಹಿಳೆಯನ್ನು 'ಪದಾರ್ಥ'(ಮೆಟೀರಿಯಲ್) ಎಂದೇ ಪರಿಗಣಿಸುತ್ತಿದಾರೆ. ಇವಳ ಮೇಲೆ ನಡೆಸುವ ಎಲ್ಲ ಬಗೆಯ ಆಕ್ರಮಣಗಳ ಮೂಲಕ ಪರಸ್ಪರ ಶತ್ರು ಸಮುದಾಯಗಳ ಮೇಲಿನ ಹಗೆ ತೃಪ್ತಗೊಂಡಂತೆ ಎಂಬುದಾಗಿ ಕೋಮುವಾದಿಗಳು ಭಾವಿಸಿದ್ದಾರೆ. 'ಕೋಮುವಾದಿ ಹಾಗೂ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯನ್ನು ಪುರುಷರ ಆಸ್ತಿ, ಅದರಿಂದ ಸಮುದಾಯದ ಆಸ್ತಿ ಎಂದೇ ಪರಿಗಣಿಸಲಾಗುತ್ತಿದೆ. ಹೀಗಾಗಿ ಶತ್ರು ಸಮುದಾಯದ ಹೆಣ್ಣಿನ ಮೇಲೆ ನಡೆಸುವ ಅತ್ಯಾಚಾರ, ದೌರ್ಜನ್ಯಗಳನ್ನು ಶತ್ರುವಿನ ಮೇಲಿನ ದೈಹಿಕ ಹಾಗೂ ಮಾನಸಿಕ ವಿಜಯವೆಂದು ಪರಿಗಣಿಸಲಾಗುತ್ತದೆ.'[೯]

ಹಿಂದೂ ಕೋಮುವಾದಿಗಳು ಮಹಿಳೆಯರನ್ನು ಒಂದು ಪ್ರಧಾನ ಗುರಿಯನ್ನಾಗಿ ಪರಿಗಣಿಸಿದ್ದಾರೆ. ತನ್ನ ಶತ್ರು ಮತೀಯರನ್ನು ಕುರಿತಾಗಿರುವ ಎಲ್ಲ ಅಸಹನೆ, ಅತೃಪ್ತಿ, ದ್ವೇಷಾಸೂಯೆಗಳನ್ನು, ಆ ಮತದ ಹೆಣ್ಣಿನ ಮೇಲೆ ಹೇರಿದ್ದಾರೆ. ಮುಸ್ಲಿಂ ಮಹಿಳೆಯರನ್ನು ಅಪಮಾನ, ಮಾನಭಂಗ ಮಾಡುವುದೆಂದರೆ ಹಿಂದೂ ಮತೀಯವಾದಿಗಳಿಗೆ ತಮ್ಮ ಪುರುಷತ್ವವನ್ನು ಮರೆದ ಹಾಗೆ, ಮುಸ್ಲಿಮರ ತಾಕತ್ತಿಗೆ ಸವಾಲು ಹಾಕಿದ ಹಾಗೆ. ಅವರ ಸಮುದಾಯದ ಪಾವಿತ್ರ್ಯತೆಯನ್ನು ಕೆಡಿಸಿ, ಅವರ ಆಸ್ತಿಯನ್ನು ಅನುಭವಿಸಿದ ಹಾಗೆ. ಹೀಗೆ ಭ್ರಮಿಸಿದ ಹಿಂದೂ ಮತೀಯವಾದಿಗಳೂ ಸಾವಿರಾರು ಮುಸಲ್ಮಾನ ಹೆಣ್ಣುಗಳನ್ನು ಹರಿದು ಮುಕ್ಕಿದ್ದಾರೆ. ತಾವು ಮಾಡುವ ಎಲ್ಲ ಕ್ರೌರ್ಯ ಮತ್ತು ಆಕ್ರಮಣಗಳಿಗೂ ಒಂದು ನ್ಯಾಯಬದ್ಧತೆಯನ್ನು ನಿರ್ಮಿಸಿಕೊಂಡಿರುವಂತೆ ಮುಸ್ಲಿಮರು 'ಕಾಮುಕರು', 'ಬಹು ಪತ್ನಿತ್ವರು' ಎಂಬ ಅಸಮಾಧಾನರೂಪಿ ಭ್ರಮೆಗಳನ್ನು ರೂಪಿಸಿಕೊಂಡಿದ್ದಾರೆ. ಇದಕ್ಕೆ ಹಿಂದೂ ಮತೀಯವಾದಿಗಳ ಮಹಾನ್ ವೀರ ಸಾವರ್ಕರ್ ಹೇಳುವ ಘನ ಸಿದ್ಧಾಂತ ಹೀಗಿದೆ: 'ಅತ್ಯಾಚಾರ ಎಂದ ಮಾತ್ರಕ್ಕೆ ಅದು ಅಪರಾಧವಲ್ಲ, ನಿಜ ಹೇಳಬೇಕೆಂದರೆ ಮುಸ್ಲಿಮರ ವಿರುದ್ಧದ ಯುದ್ಧದಲ್ಲಿ ಅದೊಂದು ಆಯುಧ. ಸಮಯ ಸ್ಥಳ, ವ್ಯಕ್ತಿ, ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಳ್ಳದೆ ಇದನ್ನು ನೈತಿಕವಾಗಿ ಕೆಟ್ಟದ್ದು ಎಂದು ಪರಿಗಣಿಸುವುದು ಉದಾತ್ತ ಗುಣದ ವಕ್ರೀಕರಣವಾಗುತ್ತದೆ. ಇದೇ ಹಿಂದೂ ರಾಷ್ಟ್ರದ ಅಪಮಾನಕ್ಕೆ ಹಾಗೂ ಸೋಲಿಗೆ ಚಾರಿತ್ರಿಕವಾಗಿ ಕಾರಣವಾಗಿದೆ'.[೧೦]

ಕೋಮು ಸಂಘರ್ಷಗಳ ಅರಾಜಕ ಸಂದರ್ಭದಲ್ಲಿ ಹಿಂದೂ ಕೋಮುವಾದಿಗಳ ಅತ್ಯಾಚಾರಕ್ಕೆ ಈಡಾಗುವ ಸಂದರ್ಭದಲ್ಲಿ ಮುಸಲ್ಮಾನ ಹೆಣ್ಣುಗಳು, ತಮ್ಮ ಮುಸಲ್ಮಾನತ್ವವನ್ನು ಕಳೆದುಕೊಂಡು ಕೇವಲ 'ಹೆಣ್ಣು' ಮಾತ್ರವಾಗಿ ಕಂಡಿದ್ದಾಳೆ. ಎಲ್ಲ ಗಲಭೆ ಗದ್ದಲಗಳಲ್ಲೂ ಹೆಣ್ಣು ತಾನು ಸೇರಿರುವ ಜಾತಿ, ಧರ್ಮ, ವರ್ಗ ಎಲ್ಲವನ್ನೂ ದಾಟಿ, ಅವಳನ್ನು ಆಸ್ತಿ ಎಂದುಕೊಡಿರುವ ಎಲ್ಲ ಪುರುಷರಿಗೂ ಕೇವಲ 'ಹೆಣ್ಣು' ಮಾತ್ರವಾಗಿ ಕಾಣುತ್ತಾಳೆ. ಪುರುಷನ ಮೂಲಭೂತ ಗುಪ್ತ ಕಾಮುಕತೆಯನ್ನು ತಣಿಸಿಕೊಳ್ಳಲು ಈ ಅರಾಜಕತೆಯನ್ನು ಸ್ವಾಗತಿಸುತ್ತಾನೆ ಹಾಗೂ ಮತ್ತೆ ಮತ್ತೆ ಸೃಷ್ಟಿಸಬಯಸುತ್ತಾನೆ. ಹಿಂದೂ ಮತೀಯವಾದಿಗಳ ಈ ವಿಕೃತ ಕಾಮುಕತೆಯನ್ನು ಮಹಿಳಾ ಜಾಗೃತಿ ಸಂಘಟನೆಯ ಸಂಚಾಲಕಿಯಾಗಿದ್ದ ಲಲಿತ ಹೀಗೆ ದಾಖಲಿಸಿದ್ದಾರೆ:

> ಸೂರತ್‌ನಲ್ಲಿ ಮುಸ್ಲಿಂ ಮಹಿಳೆಯರನ್ನು ಅತ್ಯಾಚಾರಕ್ಕೆ ಗುರಿಮಾಡಿದ್ದಷ್ಟೇ ಅಲ್ಲ ಅತ್ಯಂತ ಕೀಳುರೀತಿಯ ಲೈಂಗಿಕ ಕಿರುಕುಳಕ್ಕೆ ಈಡುಮಾಡಲಾಯಿತು. ಫ್ಲಡ್ ಲೈಟ್‌ಗಳ ಬೆಳಕಿನಡಿ ದೊಡ್ಡ ಪ್ರಮಾಣದ ಮಹಿಳೆಯರನ್ನು ಸೇರಿಸಿ ವಿವಸ್ತ್ರಗೊಳಿಸಲಾಯಿತು. ವಿಡಿಯೋ ಸಹ ಮಾಡಿ ಪ್ರದರ್ಶಿಸಲಾಯಿತು ಎಂದು ಹೇಳಲಾಗುತ್ತಿದೆ. ಕೊಲ್ಲುವ ಅಥವಾ ಅವರ ಖಾಸಗಿ ಭಾಗಗಳಲ್ಲಿ ಕಬ್ಬಿಣದ ಸಲಾಕೆಯನ್ನು

> ತುರುಕುವ ವಿಧಿಯೊಂದಿಗೆ ಈ ವಿಜಯೋತ್ಸವ ಕೊನೆಗೊಂಡಿತು. ಸಾಯುವ ಸಂದರ್ಭದಲ್ಲಿ ನತದೃಷ್ಟ ಮಹಿಳೆಯರು ಹಿಂದುತ್ವವಾದಿಗಳ ಯುದ್ಧ ಘೋಷಣೆಯಾದ 'ಜೈ ಶ್ರೀರಾಂ' (ಇದನ್ನು ಫ್ಯಾಸಿಸ್ಟರ 'ಹೇಲ್ ಹಿಟ್ಲರ್'ನೊಂದಿಗೆ ಸಮೀಕರಿಸಿ ನೋಡಿ) ಅನ್ನು ಪುನರುಚ್ಚರಿಸಬೇಕಿತ್ತು. ಅಂತಿಮವಾಗಿ ಕೆಲವರನ್ನು ಕೊಲ್ಲಲಾಯಿತು, ಕೆಲವರನ್ನು ಜೀವಂತವಾಗಿ ಸುಡಲಾಯಿತು. ಹಲವಾರು ಜನರ ಕೈಗಳ ಮೇಲೆ ಗುಪ್ತ ಅಂಗಾಂಗಗಳ ಮೇಲೆ 'ಓಂ' ಅಲ್ಲದೆ (ಇದೂ ಸಹ ನಾಜಿಗಳ 'ಸ್ವಸ್ತಿಕ್'ನಂತೆ) ಅಪರಾಧಿಗಳ ಹೆಸರನ್ನು ಹಾಗೂ ದಿನಾಂಕವನ್ನು ಕೆತ್ತಲಾಯಿತು. ಪಟಿಯಾಲದ ಹುಡುಗಿಯೊಬ್ಬಳು ತನ್ನ ಕೈ ಮೇಲೆ ರಾಕ್ಷಸರು ಕೆತ್ತಿದ ಶಾಶ್ವತ ಗುರುತನ್ನು ಅಳಿಸಿಹಾಕಲು ಆ್ಯಸಿಡ್ಡಿನಿಂದ ಕೈಯನ್ನೇ ಸುಟ್ಟುಕೊಂಡಳು.[೧೧]

ಕೋಮುವಾದವು ಮಹಿಳೆಯ ಪಾಲಿನ ಮಹಾ ನರಕವಾಗಿದ್ದರೂ, ಮತ್ತೊಂದೆಡೆ ಮಹಿಳೆಯರೂ ಕೋಮುವಾದದ ಚಟುವಟಿಕೆಗಳಲ್ಲಿ ಆಳವಾಗಿ ತೊಡಗಿಕೊಂಡಿದ್ದಾರೆ ಎಂಬುದು ಆತಂಕದ ಬೆಳವಣಿಗೆ. ಬಾಬರಿ ಮಸೀದಿಯ ಕರಸೇವೆಯಲ್ಲೇ ಸುಮಾರು ೨೦,೦೦೦ ಮಹಿಳೆಯರು ಮಸೀದಿ ಒಡೆಯುವವರಿಗೆ ಅಡುಗೆ ಮಾಡಿಕೊಂಡು, ಪಾತ್ರೆ ತೊಳೆಯುತ್ತಾ ಸಹಾಯ ಮಾಡಿದ್ದರು. ಆನಂತರ ಅಸಂಖ್ಯಾತ ಮಹಿಳೆಯರು ಕೋಮುವಾದಿ ಸಂಘಟನೆಗಳಲ್ಲಿ ತೊಡಗಿಕೊಂಡಿದ್ದಾರೆ. ಇವರೆಲ್ಲ ಮುಖ್ಯವಾಗಿ ಮೇಲ್ವರ್ಗ ಮತ್ತು ಮಧ್ಯಮವರ್ಗದ ಮಹಿಳೆಯರೇ ಆಗಿದ್ದಾರೆ. ಪುರುಷಪ್ರಧಾನ ಊಳಿಗಮಾನ್ಯ ವ್ಯವಸ್ಥೆಯಲ್ಲಿ ತನ್ನ ಸಾಮಾಜಿಕ, ರಾಜಕೀಯ ಅಸ್ತಿತ್ವವನ್ನು ಕಳೆದುಕೊಂಡು ಕುಟುಂಬದ ಒಳಗೇ ಹಬ್ಬ, ವ್ರತ, ಪೂಜೆ, ಉಪವಾಸದಲ್ಲಿ ಕೊಳೆಯುತ್ತಿದ್ದ ಮಹಿಳೆಯರಿಗೆ ಧರ್ಮದ ಹೆಸರಿನಲ್ಲಾದರೂ ಕುಟುಂಬದಿಂದ ಹೊರಗೆ ಬರುವುದು ಅವರ ಪಾಲಿಗೆ ಸ್ವಾತಂತ್ರ್ಯವಾಗಿ ಕಾಣುತ್ತಿದೆ. 'ಪುರಾಷಾಧಿಪತ್ಯ ಹಾಗೂ ಪ್ರಭುತ್ವದ ಬಗ್ಗೆ ವಿಸ್ತೃತ ರಾಜಕೀಯ ಅರಿವನ್ನು ಪಡೆಯಲು ಅವಕಾಶವಿಲ್ಲದಿರುವುದರಿಂದ ಮಹಿಳೆಯರು ತಮ್ಮ ದೈನಿಕ ನರಕದಿಂದ ಹೊರತರಬಲ್ಲ ರಕ್ಷಕರೆಂದು ಹಲವಾರು ದೇವರುಗಳನ್ನು, ಕಳ್ಳಸ್ವಾಮಿಗಳನ್ನು ನಂಬುತ್ತಾ ಬಂದಿದ್ದಾರೆ. ಸಮಸ್ಯೆ ಹೆಚ್ಚಿದಷ್ಟೂ ಅವರು ದೇವರ ಸುತ್ತ, ಹಲವಾರು ರೀತಿಯ ಮೂಢ ನಂಬಿಕೆಗಳ ಸುತ್ತ ಸುತ್ತುವುದು ಹೆಚ್ಚಾಗುತ್ತಿದೆ. ಬಿ.ಜೆ.ಪಿ., ವಿಶ್ವ ಹಿಂದೂ ಪರಿಷತ್ತಿನ ಕೂಟಗಳು ಹೊಸ ಹೊಸ ದೇವಸ್ಥಾನಗಳನ್ನು ಕಟ್ಟುವುದರಲ್ಲಿ ಹಾಗೂ ಹಳೆಯವನ್ನು ಪುನರುಜ್ಜೀರ್ಣ ಮಾಡುವುದರಲ್ಲಿ, ಯಜ್ಞ, ಆರತಿಗಳನ್ನು ನಡೆಸುವುದರಲ್ಲಿ ನಿರತವಾಗಿವೆ. ಇವೆಲ್ಲದರಲ್ಲೂ ಮಹಿಳೆಯರಿಗೆ ವಿಶೇಷ ಪಾತ್ರವನ್ನು ನೀಡಲಾಗುತ್ತಿದೆ. ಮೂಲೆಗುಂಪುಮಾಡಿ ನಿರ್ಲಕ್ಷಿಸಲ್ಪಟ್ಟಿರುವ ಮಹಿಳೆಯರು ಇದರಲ್ಲಿ ಹೆಮ್ಮೆಯನ್ನು ಕಾಣುತ್ತಾರೆ.'[೧೨]

ಕೋಮುವಾದಿಗಳು ಮಹಿಳೆಯರ ಬಗೆಗೆ ತೀರ ಸಾಂಪ್ರದಾಯಿಕವಾಗಿ ಯೋಚಿಸುತ್ತಿದ್ದಾರೆ. ಮಹಿಳೆಯರ ಶರಣಾಗತಿಯ ಸಂಕೇತಗಳಾಗಿರುವ ಸಿಂಧೂರ, ಬಳೆ, ತಾಳಿ, ರೇಷ್ಮೆಸೀರೆ ಮುಂತಾದವುಗಳನ್ನು ಸಾಂಸ್ಕೃತಿಕ ಪರಂಪರೆಯ ಹೆಮ್ಮೆಯ ಸಂಕೇತಗಳೆಂದು ವೈಭವೀಕರಿಸುತ್ತಿದ್ದಾರೆ. ಸತಿಪದ್ಧತಿಯನ್ನು, ವರದಕ್ಷಿಣೆ ಪದ್ಧತಿಯನ್ನು ದೇವದಾಸಿ ಪದ್ಧತಿಯನ್ನು ಸಮರ್ಥಿಸುತ್ತಿದ್ದಾರೆ. ಗಂಡಸರು ತಮ್ಮ ಹೆಂಡತಿಯರಿಗೆ ಹೊಡೆಯುವುದನ್ನು ಸಹ್ಯ ಎಂದು ಭಾವಿಸುತ್ತಿದ್ದಾರೆ. ಸ್ತ್ರೀಯರು ಅನುಭವಿಸಬೇಕಾದ ಈ ಯಾತನೆಯನ್ನು ಹಿಂದೂರಾಷ್ಟ್ರದ ನಿರ್ಮಾಣ ಕಾರ್ಯದಲ್ಲಿ ಹೋರಾಡುತ್ತಿರುವ ಹಿಂದೂ ಗಂಡಸರ ಸೇವೆ ಎಂದು ಭ್ರಮಿಸಲಾಗುತ್ತಿದೆ. ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ರಾಷ್ಟ್ರೀಯ ಮೌಲ್ಯ ಹಾಗೂ ಧಾರ್ಮಿಕ ಶಿಕ್ಷಣವನ್ನು ನೀಡುವಂತೆ ಒತ್ತಾಯಿಸುವ ಇವರು ಹಿಂದುತ್ವವನ್ನು ಬೆಂಬಲಿಸುವ ಪಠ್ಯವನ್ನು ತರಲು ಪ್ರಯತ್ನಿಸುತ್ತಾರೆ. ಅಲ್ಲದೆ ಹೆಣ್ಣು ಮಕ್ಕಳಿಗೆ ಮನೆ ನಡೆಸುವುದರ ಬಗೆಗೆ ತರಬೇತಿ ನೀಡುವ ಪಠ್ಯಗಳನ್ನು ಶಾಲಾ ದಿನಗಳಲ್ಲೇ ಸೇರಿಸುವಂತೆ ಶಿಫಾರಸ್ಸು ಮಾಡುತ್ತಿದ್ದಾರೆ. ಷರಿಯತ್‌ನಂಥ ಇಸ್ಲಾಂ ವೈಯಕ್ತಿಕ ಕಾನೂನು ಹಾಗೂ ಎಲ್ಲ ಧರ್ಮಗಳ ಧಾರ್ಮಿಕ ನಿಯಮಗಳು ಕೂಡ ಮಹಿಳೆಯನ್ನು ಪುರುಷಪ್ರಭುತ್ವದ ಬಲಿಯಾಗಿಯೇ ಕಾಣುತ್ತಿವೆ.

ಕೋಮುವಾದಿಗಳ ಈ ಎಲ್ಲ ಪುರೋಗಾಮಿ ಚಟುವಟಿಕೆಗಳ ನಡುವೆ ಮಹಿಳೆ ನಲುಗಿಹೋಗುತ್ತಿದ್ದರೂ ಕುಟುಂಬದ ರಚನೆಯ ಒಳಗೇ ಇರುವ ಅವಳ ಪಾಲಿನ ನರಕಗಳಿಂದ ಹೊರಬರಲಾರದೆ, ಧರ್ಮ ಹಾಗೂ ದೇವರ ಹೆಸರಿನಲ್ಲಿ ಅವಳು ಅನುಭವಿಸುತ್ತಿರುವ ಯಾತನೆಯನ್ನು 'ಸ್ತ್ರೀತನದ ಗತವೈಭವ'ಗಳಂತೆ ಬಿಂಬಿಸುತ್ತಿರುವವರ ನಡುವೆ ಸಿಕ್ಕಿ ಅರಿವಿಲ್ಲದೆ ನರಳುತ್ತಿದ್ದಾಳೆ.

ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾನಿಲಯ ಮತ್ತು ದಕ್ಷಿಣ ದೆಹಲಿಯ ಕಾಲೇಜೊಂದರ ವಿದ್ಯಾರ್ಥಿನಿಯರು 'ಮಹಿಳೆಯರು ಮತ್ತು ಬಿ.ಜೆ.ಪಿ-ಆರೆಸ್ಸೆಸ್-ವಿಹಿಂಪ' ಎಂಬ ವಿಷಯದ ಸಂಶೋಧನಾ ಪ್ರಬಂಧವನ್ನು ತಯಾರಿಸಿದ್ದಾರೆ. ಇದಕ್ಕಾಗಿ ಆರೆಸ್ಸೆಸ್‌ನ ಮಹಿಳಾ ಶಾಖೆಯಾದ 'ರಾಷ್ಟ್ರೀಯ ಸೇವಿಕಾ ಸಮಿತಿ'ಯ ಆಶಾ ಸಿನ್ಹಾ ಮತ್ತು ವಿಶ್ವ ಹಿಂದೂ ಪರಿಷತ್ತಿನ ಮಹಿಳಾ ವಿಭಾಗದ ಕೃಷ್ಣಾಶರ್ಮ ಅವರನ್ನು ಈ ವಿದ್ಯಾರ್ಥಿನಿಯರು ಸಂದರ್ಶನ ಮಾಡಿದ್ದಾರೆ. ವಿದ್ಯಾರ್ಥಿನಿಯರ ಪ್ರಶ್ನೆಗಳಿಗೆ ಉತ್ತರಿಸಿರುವ ಈ ಇಬ್ಬರು ಮಹಿಳಾಮಣಿಗಳ ಚಿಂತನೆಗಳು ನಮ್ಮನ್ನು ವೇದ ಕಾಲಕ್ಕೆ ಕೊಂಡೊಯ್ಯುತ್ತವೆ. ಮಹಿಳೆ ಚೆನ್ನಾಗಿ ಮನೆಕೆಲಸ ಮಾಡುತ್ತಾ ಮಕ್ಕಳ ಲಾಲನೆ-ಪಾಲನೆ ಮಾಡಿಕೊಂಡು ಗಂಡ ಹೊಡೆದರೂ, ಆಜೀಜಿನವರಿಗೆ ಅದು ಗೊತ್ತಾಗದಂತೆ ಗುಟ್ಟು ಮಾಡಬೇಕೆಂದು ಹೇಳುತ್ತಾರೆ. ಗಂಡಸರಿಗೆ ಮನೆಕೆಲಸ ಬರುವುದಿಲ್ಲವೆಂದೂ, ಅದನ್ನು ನೋಡಿಕೊಳ್ಳಬಲ್ಲ ಸೂಕ್ಷ್ಮತೆ ಇವಳಿಗೆ ಮಾತ್ರವಿದೆ ಎಂದು ಹೇಳುತ್ತಾರೆ. 'ಸತಿ' ಎನ್ನುವ ಪದ ಸತಿತ್ವದಿಂದ ಬಂದಿದ್ದು, ಅದರ ಅರ್ಥ: ಮನಸ್ಸಿನ ಹಾಗೂ ದೇಹದ ಶುದ್ಧತೆ ಅಥವಾ ಪಾವಿತ್ರ್ಯತೆ ಎಂದು

ಉತ್ತರಿಸಿದ್ದಾರೆ. ಅವಳ ಹಣೆಬರಹ ಚೆನ್ನಾಗಿದ್ದರೆ ಗಂಡನ ಮನೆಯಲ್ಲಿ ಓದನ್ನು ಮುಂದುವರಿಸಬಹುದಂತೆ. ಎಷ್ಟು ಸಾಧ್ಯವೋ ಅಷ್ಟು ಮುಸ್ಲಿಂ ಮಹಿಳೆಯರ ಮೇಲೆ ಅತ್ಯಾಚಾರ ಮಾಡುತ್ತಾ ಹಿಂದೂ  ಗಂಡಸರು, ತಾವು ಯಾರಿಗೂ ಕಡಿಮೆ ಇಲ್ಲ ಎಂದು ತಿಳಿಸಬೇಕೆಂಬ, ಹೆಂಗಸರೇ ನಾಚಿಕೆಪಟ್ಟುಕೊಳ್ಳುವಂಥ ಮಾತುಗಳನ್ನಾಡಿದ್ದಾರೆ.[೧೩] ಗುಜರಾತಿನ ಗಲಭೆಯಲ್ಲಿ ಗರ್ಭಿಣಿಯ ಹೊಟ್ಟೆ ಸೀಳಿ, ಕಣ್ಣೆಡದ ಕೂಸನ್ನು ಬೆಂಕಿಗೆಸೆದರು ಎಂಬ ವರದಿಗಳಿವೆ. ಇದನ್ನು ಈ ಮಹಿಳಾಮಣಿಗಳು ಹೇಗೆ ಅರಗಿಸಿಕೊಂಡರೊ?

ಅಲ್ಪಸಂಖ್ಯಾತರಿಗಷ್ಟೇ ಅಲ್ಲದೆ ಅಲ್ಪಸಂಖ್ಯಾತ ಸಮುದಾಯದೊಳಗೇ ಇರುವ ಎಲ್ಲ ಬಡವರು, ಬಹುಸಂಖ್ಯಾತ ಸಮುದಾಯಗಳ  ಬಡವರು ಹಾಗೂ ದಲಿತರೆಲ್ಲರೂ ಕೋಮುವಾದ ಹಾಗೂ ಅದರ ಸಂಘರ್ಷಗಳ ಬಲಿಪಶುಗಳೇ. ಕೋಮುವಾದವೂ ಎಲ್ಲ ಕೆಳಜಾತಿ ಮತ್ತು ದಲಿತರ ಪಾಲಿಗೆ ಹೊಸ ಆವೃತ್ತಿಯ ಬ್ರಾಹ್ಮಣಶಾಹಿಯನ್ನು ಹೇರುತ್ತದೆ ಎಂದು ಈಗಾಗಲೇ ವಿವರಿಸಿದ್ದೇನೆ. ಇನ್ನು ಎಲ್ಲ ಕೋಮುಗಲಭೆಗಳಲ್ಲೂ ನಾಶವಾಗುವುದು ಬಡವರ, ಅಸಹಾಯಕರ ಮನೆ, ಅಂಗಡಿಗಳೇ ಎಂಬುದು ಕೋಮು ಗಲಭೆಯ ವರದಿಗಳಲ್ಲಿ ದಾಖಲಾಗಿದೆ. ಇಂಥ ಗಲಭೆಗಳಲ್ಲಿ ಅಂತಿಮವಾಗಿ ಲಾಭ ಪಡೆವವರು ಎಲ್ಲ ಧರ್ಮಗಳ ಬಂಡವಾಳಶಾಹಿಗಳೇ. ಕೋಮುಗಲಭೆಗಳಂಥ ಅರಾಜಕ ಸನ್ನಿವೇಶಗಳಲ್ಲಿ ಸಣ್ಣಪುಟ್ಟ ವಹಿವಾಟುಗಳನ್ನು ಭಸ್ಮಮಾಡಿ ತನ್ನ ವ್ಯವಹಾರದ ಸಾರ್ವಭೌಮತ್ವವನ್ನು ಸ್ಥಾಪಿಸಿಕೊಳ್ಳುವುದು ಕೂಡ ಇಲ್ಲಿ ಬಂಡವಾಳಶಾಹಿಗಳ ಒಳತಂತ್ರವಾಗಿರುತ್ತದೆ. ಸಿ.ಎಸ್. ದ್ವಾರಕಾನಾಥ್ ಅವರು 'ಲಂಕೇಶ್ ಪತ್ರಿಕೆ'ಗಾಗಿ ಕೋಲಾರದ ಮತೀಯ ಗಲಭೆಯ ಸಂದರ್ಭದಲ್ಲಿ ಮಾಡಿದ ವರದಿ ಹೀಗಿದೆ:

> ಕೋಲಾರದಲ್ಲಿ ಯಾವಾಗ ಕೋಮುಗಲಭೆಯಾದರೂ ಗಲಭೆಗಳಲ್ಲಿ ಸಿಕ್ಕಿಬೀಳುವವರು, ಹೊಡೆದಾಟದಲ್ಲೂ ನೊಂದು ಪೊಲೀಸರಿಂದಲೂ ಒದೆತಿಂದು, ಕೇಸುಗಳಲ್ಲಿ ಸಿಕ್ಕಿಹಾಕಿಕೊಂಡು ತಮ್ಮ ಜೀವನವನ್ನೇ ಕತ್ತಲು ಮಾಡಿಕೊಳ್ಳುವವರು ಬಹುತೇಕ ಒಕ್ಕಲಿಗರು, ಕುರುಬರು, ಬಣಜಿಗರೇ ಮುಂತಾದ ಹಿಂದುಳಿದವರು. ಕೋಮುಗಲಭೆಗಳನ್ನು ಏರ್ಪಡಿಸುವವರು ಮಾತ್ರ ಬ್ರಾಹ್ಮಣರು ಮತ್ತು ಶೆಟ್ಟರು. ಅದೇ ರೀತಿ ಮುಸ್ಲಿಮರಲ್ಲಿ ನೋವುಣ್ಣುವವರು ಕೂಲಿಗಳು, ಬೀಡಿಸುತ್ತುವ, ರೇಷ್ಮೆ ತೆಗೆಯುವವರು, ಕಳ್ಳೆಕಾಯಿ, ಕಲ್ಲಂಗಡಿ ಮಾರುವ ಬಡವರು ಮಾತ್ರ. ಕೆಳವರ್ಗದ ಜನತೆಗೆ ವಿದ್ಯೆ ನೀಡದಂತೆ  ಇವರನ್ನು ಕತ್ತಲಲ್ಲೇ ಇಟ್ಟು ರಾಜಕಾರಣ ಮಾಡುತ್ತಾ, ಬಸ್ ಮಾಲೀಕರು, ದೊಡ್ಡ ವ್ಯಾಪಾರಿಗಳೊಂದಿಗೆ ಮೋಜುಮಾಡುವ ಮುಸ್ಲಿಂ ನಾಯಕರು ಮಾತ್ರ ಕೋಮುಗಲಭೆಗಳಿಗೆ ವೇದಿಕೆ ನಿರ್ಮಿಸಿ, ಬಡ ಮುಸ್ಲಿಮರನ್ನು ಬಲಿಕೊಟ್ಟು 'ಅಲ್ಪಸಂಖ್ಯಾತ' ರಾಜಕಾರಣವನ್ನು ಯಶಸ್ವಿಯಾಗಿ ಮಾಡಿಕೊಳ್ಳುತ್ತಾರೆ.[೧೪]

ಕೋಲಾರದಲ್ಲಿ ಮಾತ್ರವಲ್ಲ, ಎಲ್ಲ ಕೋಮುಗಲಭೆಗಳಲ್ಲೂ ಆಯಾ ಪ್ರದೇಶದ ಎಲ್ಲ ಜಾತಿ, ಧರ್ಮದ ಬಡವರು, ದಲಿತರು, ಹೆಂಗಸರು ಬಲಿಯಾಗುತ್ತಾರೆಂಬ ಸತ್ಯವನ್ನು ವರದಿಗಳು ಹೇಳುತ್ತವೆ.

**೬.೪ ಸತ್ವ ಕಳೆದುಕೊಳ್ಳುವ ಪ್ರಗತಿಪರ ಚಳವಳಿಗಳು**

ಕೋಮುವಾದಿಗಳು ನಡೆಸುವ ಸಂಘರ್ಷಗಳು, ಹಿಂಸೆ, ಅರಾಜಕತೆ ಹೆಚ್ಚಾದಂತೆ ಇಡೀ ಮಾನವ ಸಮುದಾಯವನ್ನು ನಿಜವಾದ ಸಂಬಂಧಗಳ ಕಡೆಗೆ, ವಿಕಾಸದ ಕಡೆಗೆ ಕರೆದೊಯ್ಯುವ ಎಲ್ಲಾ ಪ್ರಗತಿಪರ ಚಳುವಳಿಗಳು ಮಂಕಾಗುತ್ತಾ ನೆಲಕಚ್ಚುತ್ತವೆ. ಎಲ್ಲ ಬಿಕ್ಕಟ್ಟುಗಳಿಗಿಂತ ಕೋಮುವಾದವೇ ಮತೀಯವಾದಿಗಳಿಗೆ ದೊಡ್ಡ ಉದ್ದೇಶವಾಗಿ, ಮಾನವತಾವಾದಿಗಳಿಗೆ ಸಾಮರಸ್ಯ ಬಯಸಲು ಹೋರಾಡುವ ಅನಿವಾರ್ಯತೆ ನಿರ್ಮಾಣವಾಗುತ್ತದೆ. ಮತ್ತಷ್ಟು ಬಿರುಕು ಮೂಡಿಸುತ್ತಲೇ ಸಾಗುವ ಕೋಮುವಾದಿಗಳ ವಿರುದ್ಧದ ಪ್ರಶ್ನೆಯನ್ನೇ ಮಾನವತಾವಾದಿಗಳು ಮುಖ್ಯವಾಗಿ ಪರಿಗಣಿಸುವ ಒತ್ತಡದಿಂದಾಗಿ ಜನರ ನಿಜವಾದ ಸಮಸ್ಯೆಗಳು ತೆಳುವಾಗಿ ಕಾಣಲಾರಂಭಿಸುತ್ತವೆ.

ಎಲ್ಲ ಧರ್ಮ, ಜಾತಿಯ ಮಹಿಳೆಯರೂ ಪುರುಷ ಪ್ರಭುತ್ವದ ತಳದಲ್ಲಿ ನರಳುತ್ತಿರುವವರೇ. ಈ ಹಿಂದೆ ಗಮನಿಸಿದಂತೆ ಕೋಮುವಾದೀ ಸ್ತ್ರೀ ಗುಂಪು ತನ್ನನ್ನು ಮತ್ತಷ್ಟು ಸಾಂಪ್ರದಾಯಿಕಗೊಳಿಸಿಕೊಳ್ಳುತ್ತಿದೆ. ಇವರು ತ್ಯಾಗಿ, ರಾಷ್ಟ್ರೋದ್ಧಾರಕರ ಸೇವಕಿ, ವೀರಮಾತೆ, ಸಹನಶೀಲೆ ಎಂಬ ಗತಕಾಲದ ಹುಸಿ ವೈಭವೀಕರಣಗಳ ಪದಕಗಳನ್ನು ಮುಗಿಬಿದ್ದು ಧರಿಸಿಕೊಳ್ಳುತ್ತಿದ್ದಾರೆ. ಮತ್ತೊಂದೆಡೆ ೨೦ನೇ ಶತಮಾನದ ಬಹುಮುಖ್ಯ ಚಳವಳಿಗಳಲ್ಲೊಂದಾದ ಸ್ತ್ರೀವಾದಿ ಚಳವಳಿಯ ಚಿಂತಕಿಯರು ಆ ಎಲ್ಲ ಪದಕಗಳು ಪುರುಷನಿರ್ಮಿತ ಸ್ತ್ರೀ ಸಂಕಥನಗಳು ಎಂದು ಬಿಡಿಸಿ ಹೇಳುತ್ತಿದ್ದಾರೆ. ಇದ್ಯಾವುದೂ ನಮ್ಮ ಮತೀಯವಾದಿ ಮಣಿಮುಕುಟಗಳಾಗಲು ಮುಂದಾಗಿರುವ ಮಹಿಳೆಯರಿಗೆ ಅರ್ಥವಾಗುತ್ತಲೇ ಇಲ್ಲ. ಅಂತಿಮವಾಗಿ ಇದು ಕಳೆದ ಶತಮಾನದ ಕೊನೆಯ ದಶಕಗಳಲ್ಲಿ ಸ್ತ್ರೀಯನ್ನು ಕೊಂಚ ಚಲಿಸುವಂತೆ ಮಾಡಿದ ಸ್ತ್ರೀವಾದಿ ಚಳವಳಿಗೆ ಬಿದ್ದ ಹೊಡೆತವೇ.

ದಲಿತರ ಮಾರಣಹೋಮ, ಅಸ್ಪೃಶ್ಯ ಆಚರಣೆಗಳು, ಪರಿಸರ ನಾಶ, ಜಾಗತೀಕರಣ, ರೈತನ ಸಾವು, ಅನರಕ್ಷತೆ, ಬಡತನ, ಮೌಢ್ಯತೆ, ಜಾತೀಯತೆ, ಭಯೋತ್ಪಾದನೆ, ತೀವ್ರವಾಗುತ್ತ ಸಾಗುತ್ತಿರುವ ಲಂಚಗುಳಿತನ, ಇತ್ತೀಚೆಗೆ ಶುರುವಾಗಿರುವ ನಕ್ಸಲಿಸಂ– ಈ ಎಲ್ಲವೂ ಕೋಮುವಾದಿಗಳ ಎದುರು ಅಸಂಗತವಾಗುತ್ತಿವೆ. ಕೋಮುಸಾಮರಸ್ಯ ಕನಸಾಗುತ್ತಿದೆ. ಅಂತರಧರ್ಮೀಯ ವಿವಾಹಗಳು ದೂರದ ಮಾತಾಗುತ್ತಿವೆ. ರೈತ ಚಳವಳಿಗಳು, ಕಾರ್ಮಿಕ

ಚಳವಳಿಗಳು ತಣ್ಣಗಾಗುತ್ತಿವೆ. ರೈತ, ಕಾರ್ಮಿಕರು ಎಲ್ಲ ಜಾತಿ, ಧರ್ಮಗಳಿಂದ ರೂಪಿಸಲ್ಪಡುವ ಒಂದು ಸಮುದಾಯವಾಗಿರುವಾಗ, ಅವರೊಳಗೇ ಇರುವ ಮತೀಯವಾದಿಗಳ ಕಾರಣಕ್ಕಾಗಿ ತಮ್ಮ ಸಮಷ್ಟಿಯನ್ನು ಮುರಿದುಕೊಂಡು ಒಡಕುಗಳಾಗುತ್ತಿವೆ. ಪ್ರಜಾಪ್ರಭುತ್ವ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ, ಬಹುಸಂಖ್ಯಾತರ ಒಳಗೇ ರೂಪುಗೊಳ್ಳುವ ಮತೀಯವಾದೀ ನಾಯಕರಿಂದ ಒಂದು ಬಗೆಯ ವಿಕಾರರೂಪಿ ಸರ್ವಾಧಿಕಾರ ನಿರ್ಮಾಣವಾಗತೊಡಗುತ್ತಿದೆ.

### ೬.೫ ಮತೀಯವಾಗುತ್ತಾ ಸಾಗುವ ಸಮಾಜ

ಕೋಮುವಾದದ ಕಾರಣದಿಂದಾಗಿ ಸಮಾಜ ಹಳೆಯ ಕಂದಾಚಾರಗಳಿಗೆ, ಮೌಢ್ಯಗಳಿಗೆ, ಅರ್ಥಹೀನ ಸಾಂಪ್ರದಾಯಿಕತೆ ಮತ್ತು ಆಚರಣೆಗಳಿಗೆ ಪುನರ್‌ಜನ್ಮ ನೀಡತೊಡಗಿದೆ. ಎಲ್ಲ ಕೋಮಿನ ಜನತೆ ತಮ್ಮ ಧರ್ಮದ 'ಸಮೃದ್ಧ ಐಡೆಂಟಿಟಿ'ಯನ್ನು ತೋರಿಸಲು ದೇವರು, ಧರ್ಮದ ಕಡೆಗೆ ಮುಖಮಾಡುತ್ತಾರೆ. ಹುಸಿ ಮಠಾಧೀಶರು, ಕಳ್ಳ ಸ್ವಾಮೀಜಿಗಳು, ಗೋಸುಂಬೆ ಮುಲ್ಲಾಗಳು ಮತೀಯವಾದಿ ಮನಸ್ಸಿನ ಜನರಿಗೆ ತಮ್ಮ 'ದಿವ್ಯ' ಧರ್ಮದ, ಜಾತಿಯ ಸಾಮುದಾಯಿಕ ಪ್ರತಿನಿಧಿಗಳಾಗಿ ಕಾಣತೊಡಗುತ್ತಾರೆ. ಪಾರಂಪರಿಕ ಪ್ರತಿಮೆಗಳು ಮತೀಯ ಪ್ರಾತಿನಿಧ್ಯವನ್ನು ವಹಿಸಲಾರಂಭಿಸುತ್ತವೆ. ಧಾರ್ಮಿಕ 'ಪುಣ್ಯಕ್ಷೇತ್ರಗಳು' ಪ್ರಸಿದ್ಧವಾಗುತ್ತವೆ. ಷರಿಯತ್‌ನಂಥ ಕಾನೂನುಗಳು ಗಟ್ಟಿಯಾಗತೊಡಗುತ್ತವೆ. ಹಬ್ಬಗಳು ಎಲ್ಲರಿಗೂ ಸಂತೋಷವನ್ನು ಕೊಡುವ ಸಾಮುದಾಯಿಕ ನಿರುಮ್ಮಳ ಆಚರಣೆಗಳಾಗದೆ, ಮತ್ತೊಂದು ಮತದ ಜನತೆಯನ್ನು ತಮ್ಮ ಅದ್ಧೂರಿತನದಿಂದ ಕೆರಳಿಸುವ ವಿಜೃಂಭಣೆಗಳಾಗುತ್ತವೆ. ನಿಜವಾದ ಜಾತ್ಯತೀತ, ಮಾನವತಾವಾದಿಗಳು ಕಣ್ಮರೆಯಾಗುತ್ತಾರೆ. ಉಮಾಭಾರತಿಯಂಥವರು ಸಾಧ್ವಿಗಳಾಗಿ, ಸುಷ್ಮ ಸ್ವರಾಜ್‌ರಂಥ ಅಗಲ ಕುಂಕುಮವಿಟ್ಟು ತಲೆಬಾಗಿ ನಡೆವ ಮಹಿಳೆಯರು ಮಾದರಿಗಳಾಗುತ್ತಾರೆ. ರವಿಶಂಕರ ಗುರೂಜಿಯಂಥವರು ವಿಶ್ವಶಾಂತಿದೂತನಾಗುತ್ತಾ ಗಾಂಧಿ, ಬಸವಣ್ಣ ಆ ಜಾಗದಿಂದ ಪಲ್ಲಟಗೊಳ್ಳುತ್ತಾರೆ. ಗಾಯತ್ರಿ ಮಂತ್ರ, ಹನುಮಾನ್ ಚಾಲೀಸಾಗಳು ಅಖಿಲಭಾರತೀಯ ಪಠ್ಯಗಳಾಗುತ್ತಾ ವಚನಗಳು, ಕೀರ್ತನೆಗಳು, ಸರ್ವಜ್ಞನ ತ್ರಿಪದಿಗಳು ಹಾಗೂ ಶ್ರಮ ಸಂಸ್ಕೃತಿಯು ಕಟ್ಟಿರುವ ಅಸಂಖ್ಯಾತ ಜಾನಪದ ಕಥನಗಳು ಹಿನ್ನೆಲೆಗೆ ಸರಿಯುತೊಡಗುತ್ತವೆ.

## ಕೊನೆ ಟಿಪ್ಪಣಿಗಳು

೧. ಕೆ.ವಿ. ಸುಬ್ಬಣ್ಣ, 'ಗುಜರಾತ್ ಸ್ವಗತ', ಸಂ: ಟಿ.ಪಿ. ಅಶೋಕ, ಅರೆಶತಮಾನದ ಅಲೆ ಬರಹಗಳು, ೨೦೦೪, ಹೆಗ್ಗೋಡು: ಅಕ್ಷರ ಪ್ರಕಾಶನ, ಪುಟ: ೧೩೨.

೨. ಅದೇ, ಪುಟ: ೧೩೨

೩. ರಾಮ ಜನ್ಮಭೂಮಿ ಹಿಂಸಾಕಾಂಡ, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ.

೪. ಜಿ. ರಾಜಶೇಖರ್, ಕೆ. ಫಣಿರಾಜ್ 'ಕೋಮುವಾದದ ವರಸೆಗಳು: ನಾವು ಕಂಡಂತೆ', ಎಸ್.ಆರ್. ಭಟ್, ಜಿ. ರಾಜಶೇಖರ್, ಕೆ. ಫಣಿರಾಜ್, ಕೋಮುವಾದದ ಕರಾಳ ಮುಖಗಳು, ೨೦೦೫, ಬೆಂಗಳೂರು: ನವಕರ್ನಾಟಕ ಪ್ರಕಾಶನ, ಪುಟ: ೧೭೮

೫. ಎಸ್.ಆರ್. ಭಟ್, 'ಭಯಾನಕ ಪರಿಸ್ಥಿತಿ', ಎಸ್.ಆರ್. ಭಟ್, ಜಿ. ರಾಜಶೇಖರ್, ಕೆ. ಫಣಿರಾಜ್, ಕೋಮುವಾದದ ಕರಾಳ ಮುಖಗಳು, ೨೦೦೫, ಬೆಂಗಳೂರು: ನವಕರ್ನಾಟಕ ಪ್ರಕಾಶನ, ಪುಟ: ೧೮-೧೯

೬. ಜಿ. ರಾಮಕೃಷ್ಣ, ಮುನ್ನುಡಿ, ಕೋಮುವಾದದ ಕರಾಳ ಮುಖಗಳು, ಎಸ್.ಆರ್. ಭಟ್, ಜಿ. ರಾಜಶೇಖರ್, ಕೆ. ಫಣಿರಾಜ್, ೨೦೦೫, ಬೆಂಗಳೂರು: ನವಕರ್ನಾಟಕ ಪ್ರಕಾಶನ, ಪುಟ: ೪-೫.

೭. ಕೆ. ಫಣಿರಾಜ್, 'ಕೋಮುವಾದದ ಸ್ವರೂಪ ಮತ್ತು ಆತಂಕ', ಸಂ: ಬಿಸ್ಲೇಹಳ್ಳಿ ಪ್ರಭು, ಎಚ್. ಆರ್. ಸ್ವಾಮಿ, ಮಾನವತೆಯು ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್. ಪುಟ: ೨೦೪-೨೦೫.

೮. ನಟರಾಜ್ ಹುಳಿಯಾರ್, 'ಸುಳ್ಳು ಬಿತ್ತಿ ಸುಳ್ಳು ಬೆಳೆವವರ ನಡುವೆ', 'ಗಾಳಿ ಬೆಳಕು' ಅಂಕಣ ಬರಹ 'ಕನ್ನಡ ಟೈಮ್ಸ್' ವಾರ ಪತ್ರಿಕೆ, ಸಂ: ಕೆ.ಎಲ್. ಚಂದ್ರಶೇಖರ್, ಸಂಪುಟ: ೧, ಸಂಚಿಕೆ: ೨೦, ಸೆಪ್ಟಂಬರ್ ೨೮, ೨೦೦೭.

೯. ಇಷ್ರತ್ ನಿಸಾರ್, 'ಸಂಪ್ರದಾಯದ ಬಂಧನದಲ್ಲಿ ಮಹಿಳೆಯರು' ಸಂ: ಬಿಸ್ಲೇಹಳ್ಳಿ ಪ್ರಭು, ಎಚ್.ಆರ್. ಸ್ವಾಮಿ, 'ಮಾನವತೆಯ ತುಡಿಗಳು', ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಪುಟ: ೨೭೫.

೧೦. ಉದ್ಧೃತ: ಲಲಿತ, 'ಮಹಿಳೆಯರ ಮೇಲಿನ ಕೋಮುವಾದಿ ಹಿಂಸೆ ಮತ್ತು ಮಹಿಳಾ ಚಳುವಳಿಯ ಜವಾಬ್ದಾರಿ', ಮಹಿಳೆ ಮತ್ತು ಕೋಮುವಾದ, ೨೦೦೦, ಬೆಂಗಳೂರು: ಮಹಿಳಾ ಜಾಗೃತಿ ಪ್ರಕಟಣೆ, ಪುಟ: ೩೮.

೧೧. ಅದೇ, ಪುಟ: ೩೮.

೧೨. ಅದೇ, ಪುಟ: ೪೦-೪೧.

೧೩. ಅನಿತಾ, ಮನೀಶಾ, ವಸುಧಾ, ಕವಿತಾ ಎಂಬ ದೆಹಲಿಯ ಸಂಶೋಧನಾ ವಿದ್ಯಾರ್ಥಿನಿಯರು ನಡೆಸಿದ ಈ ಸಂದರ್ಶನವನ್ನು ತನಿಖಾ ಸರ್ಕಾರ್ ಮತ್ತು ಊರ್ವಶಿ ಬುತಾಲಿಯ ಅವರು ಸಂಪಾದಿಸಿರುವ 'ಮಹಿಳೆಯರು ಮತ್ತು ಹಿಂದೂ ಹಕ್ಕುಗಳು' ಎಂಬ ಪುಸ್ತಕದಲ್ಲಿ ಒಂದು ಲೇಖನವನ್ನಾಗಿ ಬಳಸಿಕೊಂಡಿದ್ದಾರೆ. ಈ ಲೇಖನ ಮಹಿಳಾ ಜಾಗೃತಿಯ ಪ್ರಕಟಣೆ 'ಮಹಿಳೆ ಮತ್ತು ಕೋಮುವಾದ' (೨೦೦೦) ಎಂಬ ಪುಸ್ತಕದಲ್ಲಿ ಮರು ಬಳಕೆಯಾಗಿದೆ. ಹೆಚ್ಚಿನ ವಿವರಗಳಿಗೆ ಈ ಪುಸ್ತಕವನ್ನು ನೋಡಬಹುದು.

೧೪. ಸಿ.ಎಸ್. ದ್ವಾರಕಾನಾಥ್, ರಾಮ ಜನ್ಮಭೂಮಿ ಹಿಂಸಾಕಾಂಡ, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ, ಪುಟ: ೨೧

ಅಧ್ಯಾಯ ೭

## ಕೋಮು ಸಾಮರಸ್ಯ : ಕನ್ನಡ ಚಿಂತನೆ ಕಂಡ ದಾರಿಗಳು

ಮತೀಯವಾದಿಗಳು ಸಹಜ ಬದುಕನ್ನು ಅಸಹನೀಯವಾಗಿಸುತ್ತಾ ಸಾಗಿದಂತೆ, ಅದರ ನಡುವೆಯೇ ಮನುಷ್ಯ ಸಂಬಂಧಗಳನ್ನು ಬೆಸೆವ ಮಾನವೀಯ ಚಿಂತನೆಗಳು ರೂಪುಪಡೆದಿವೆ. ಜೈನರು, ಶೈವರು, ವೈಷ್ಣವರು ಪರಸ್ಪರ ಮತೀಯ ವಿದ್ವೇಷದಲ್ಲಿ ತೊಡಗಿದ್ದ ಸಂದರ್ಭದಲ್ಲೇ 'ಮಾನವ ಕುಲಂ ತಾನೊಂದೆ ವಲಂ' ಎಂಬ ಪಂಪನ ಮಾತುಗಳು, 'ಕುಲಕುಲವೆಂದು ಹೊಡೆದಾಡದಿರಿ' ಎಂಬ ಕೀರ್ತನಕಾರನ ಮಾನವೀಯ ಸ್ಪಂದನಗಳು ಹೊಮ್ಮಿವೆ.

ಆಧುನಿಕ ಕನ್ನಡ ಸಂಸ್ಕೃತಿ ಚಿಂತನೆ ಕೂಡ ಕೋಮು ಸಾಮರಸ್ಯದ ದಿಕ್ಕಿನಲ್ಲಿ ವಿಶಾಲವಾಗಿ ಆಲೋಚಿಸಿವೆ. ಈ ಹಿಂದೆ ನಾವು ಕಂಡಂತೆ ಲಂಕೇಶ್, ಸುಬ್ಬಣ್ಣ, ಡಿ.ಆರ್. ನಾಗರಾಜರು ರಾಮಮಂದಿರ ವಿವಾದಕ್ಕೆ ಸಂಬಂಧಿಸಿದಂತೆ ಬರೆಯುತ್ತಾ ರಾಮನನ್ನು ವಿವರಿಸಿಕೊಳ್ಳುವ ಚಿಂತನಾಕ್ರಮಗಳಲ್ಲೇ ಮತೀಯ ಸಾಮರಸ್ಯದ ನೆಲೆಗಳಿವೆ. 'ಧರ್ಮ ಬಿಡಿ, ಜಾತಿ ಬಿಡಿ, ಮಾನವತೆಗೆ ಜೀವ ಕೊಡಿ' ಹಾಗೂ 'ಇಟ್ಟಿಗೆ ಪವಿತ್ರವಲ್ಲ; ಜೀವ ಪವಿತ್ರ' ಎಂಬ ಮಾನವೀಯ ಜೀವ ಸೆಲೆ ಇರುವಂಥ ಸಾಮರಸ್ಯದ ತಾಣಗಳನ್ನು ಕನ್ನಡ ಚಿಂತನೆ ನಿರ್ಮಿಸಲೆತ್ನಿಸಿದೆ. ಇದರ ಜೊತೆಗೇ ಯು.ಆರ್. ಅನಂತಮೂರ್ತಿ, ಎಂ.ಡಿ. ನಂಜುಂಡಸ್ವಾಮಿ, ಕೆ. ರಾಮದಾಸ್, ಬರಗೂರು ರಾಮಚಂದ್ರಪ್ಪ, ಜಿ. ರಾಜಶೇಖರ್, ರಾಜೇಂದ್ರ ಚೆನ್ನಿ, ಜಿ.ಕೆ. ಗೋವಿಂದರಾವ್, ಜಿ. ರಾಮಕೃಷ್ಣ, ಬಾನು ಮುಷ್ತಾಕ್, ಸಾರಾ ಅಬೂಬಕ್ಕರ್, ಶಿವಮೂರ್ತಿ ಮುರುಘರಾಜೇಂದ್ರ ಸ್ವಾಮೀಜಿ, ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, ವೀರಭದ್ರ ಚನ್ನಮಲ್ಲ ಸ್ವಾಮೀಜಿ ಮುಂತಾದವರ ಚಿಂತನೆಗಳು ಹಾಗೂ ದಲಿತ ಸಂಘರ್ಷ ಸಮಿತಿಯ ಚಿಂತನೆಗಳು ಕೂಡ ಕೋಮುವಾದವನ್ನು ವಿಮರ್ಶಿಸಿವೆ.

'ನಮ್ಮ ಸಾಮಾಜಿಕ ಮತ್ತು ಮತೀಯ ದೋಷ, ದೌರ್ಬಲ್ಯಗಳನ್ನು ಆಶ್ರಯಿಸಿ' ನಮ್ಮ ನಮ್ಮೊಳಗೇ ಒಡಕು ಬಿರುಕುಗಳನ್ನು ಹುಟ್ಟಿಸಿ, ನಮ್ಮನ್ನು ಸದೆಬಡಿದು, ಬ್ರಿಟಿಷರ

ರಾಜತಂತ್ರ ನಿಪುಣತೆ ಅಟ್ಟಹಾಸದಿಂದ ವಿಜೃಂಭಿಸುತ್ತಿದ್ದ ಕಾಲ'ದಲ್ಲಿ 'ಮತೀಯ ಮತ್ತು ಸಾಮಾಜಿಕ ಅಂಧಶ್ರದ್ಧೆ ಮತ್ತು ಅಂಧಾಚಾರಗಳಿಂದ ನಾವು ಪಾರಾಗದಿದ್ದರೆ ನಮಗೆ ಉದ್ಧಾರವಿಲ್ಲ ಎಂಬ ನಂಬುಗೆಯ ಹಿನ್ನೆಲೆಯಲ್ಲಿ' ಕುವೆಂಪು ಮತೀಯ ಚಿಂತನೆಗಳಿಂದ ಯುವ ಜನಾಂಗವನ್ನು ಪಾರು ಮಾಡಲು ಯತ್ನಿಸಿದ್ದಾರೆ. 'ವೇದ ಪೂರೈಸಿದ ಗ್ರಂಥವಲ್ಲ; ವೇದದ ಕಟ್ಟಕಡೆಯ ಅಧ್ಯಾಯ ಅಂದಿಗೇ ಮುಗಿದಿಲ್ಲ. ಅದು ಇಂದಿಗೂ ನಾಳೆಗೂ ಮುಂದುವರಿಯುತ್ತದೆ' ಎನ್ನುತ್ತಾ ಧರ್ಮಗ್ರಂಥಗಳಿಗೆ ಜೋತುಬಿದ್ದು, ಮಾನವತೆಯನ್ನು ಮರೆತ ಮೂಲಭೂತವಾದಿ, ಮತೀಯವಾದಿಗಳನ್ನು ಕುವೆಂಪು ತಿದ್ದಲೆತ್ನಿಸಿದ್ದಾರೆ.[೧]

ಐರೋಪ್ಯ ರಾಷ್ಟ್ರ ಪ್ರಭುತ್ವಗಳು ಹೇಳುವ ಒಂದು ರಾಷ್ಟ್ರ, ಒಂದು ಧರ್ಮ, ಒಂದು ಭಾಷೆ ಈ ಕಲ್ಪನೆಯಲ್ಲೇ ಯೋಚಿಸುವ ಮತೀಯವಾದಿಗಳು ಭಾರತದಂಥ, ಬಹುಮುಖಿ ಸಂಸ್ಕೃತಿಯ ನಾಡಿನಲ್ಲಿ ಭಿನ್ನತೆಯಲ್ಲೇ ಏಕತೆಯನ್ನು ಕಾಣಬೇಕಾಗಿದೆ. ಈ ಬಗೆಯ ಸಾಮರಸ್ಯವನ್ನು ವಚನ ಚಳವಳಿ ಹಾಗೂ ಅಸಂಖ್ಯಾತ ಜನಪದ ಸಂಸ್ಕೃತಿಗಳು ಸಾಧಿಸಿವೆ. ವೈವಿಧ್ಯತೆ ಇರುವುದೇ ತೊಡಕು ಎಂದು ಭ್ರಮಿಸಿ ಒಂದು ಏಕಘನಾಕೃತಿಯಾದ ಭಾರತವನ್ನು ಕಲ್ಪಿಸಿಕೊಂಡು, ಅದರ ನಿರ್ಮಾಣಕ್ಕೆ ಹಾತೊರೆವ ಮತೀಯವಾದಿಗಳು ಇದನ್ನು ಅರಿಯಬೇಕಿದೆ.

ವಸಾಹತುಶಾಹಿಗಳು ಕಟ್ಟಿಕೊಟ್ಟ ಮುಸ್ಲಿಂ ವಿರೋಧಿ ಕೋಮುಭಾವನೆ ಉದಾರವಾದಿ ಹಿಂದೂಗಳಲ್ಲಿ ಹಬ್ಬತೊಡಗಿದೆ. ವಸಾಹತುಪೂರ್ವದಲ್ಲಿ ಮುಸ್ಲಿಮರು ಎಲ್ಲ ಚರಿತ್ರೆಯಲ್ಲಾಗುವಂತೆ ಭಾರತದಲ್ಲಿ ದಾಳಿಮಾಡಿದ್ದಾರೆ, ಗೆದ್ದಿದ್ದಾರೆ, ಸೋತಿದ್ದಾರೆ, ಇಲ್ಲೇ ಒಂದಾಗಿ ಬದುಕಿದ್ದಾರೆ. ಇಂದೂ ಕೂಡ ಸಾಮರಸ್ಯದಿಂದ ಬದುಕಬೇಕಿದೆ. ಹಿಂದೂಗಳು ಇದನ್ನು ಅರಿಯಬೇಕಿದೆ. ೧೮ನೇ ಶತಮಾನದ ಸಂಸ್ಕೃತಿ ಕಥನಕಾರ ದೇವಚಂದ್ರ ತನ್ನ 'ರಾಜಾವಳಿ ಕಥೆ'ಯಲ್ಲಿ ವೈಷ್ಣವ, ಶೈವರೆಲ್ಲರ ಬಗೆಗೆ, ಅವರೆಲ್ಲರೂ ಪರಸ್ಪರ ಆಕ್ರಮಣಕಾರರು ಎಂಬ ದನಿಯಲ್ಲಿ ಮಾತನಾಡಿ, ಮುಸಲ್ಮಾನರ ಬಗೆಗೆ ನಲ್ಮೆಯಿಂದ ಬರೆದಿದ್ದಾನೆ. ಜೈನನಾದ ದೇವಚಂದ್ರನಿಗೆ ಮುಸಲ್ಮಾನರನ್ನು ಕುರಿತು ಒಲುಮೆಯಿರಬೇಕಾದರೆ, ಮುಸ್ಲಿಮರು ಶೈವ, ವೈಷ್ಣವರಿಗಿಂತ ಸಾಮರಸ್ಯದಿಂದ ಬಾಳುತ್ತಿದ್ದಿರಬೇಕು. ಮುಸಲ್ಮಾನರಿಗಿಂತ ಶೈವ, ವೈಷ್ಣವರೇ ಪರಸ್ಪರ ಹಿಂಸೆ, ಪ್ರತಿಹಿಂಸೆಯಲ್ಲಿ ತೊಡಗಿ ಜೈನರ ಮೇಲೆ ದಾಳಿಮಾಡುತ್ತಿದ್ದರು ಎಂದು ಯಾರಾದರೂ ಅರಿಯಬಹುದು. ಅಲ್ಲದೆ ದೇವಚಂದ್ರನು ಜೈನರು ಮುಸಲ್ಮಾನರಾದರು ಎಂದು ದಾಖಲಿಸುತ್ತಾನೆ. ಈ ಕುರಿತು ರಹಮತ್ ತರೀಕೆರೆ ಹೀಗೆ ಬರೆಯುತ್ತಾರೆ:

> ಒಂದು ಕಾಲಕ್ಕೆ ರಾಜಾಶ್ರಯ ಪಡೆದು ಝಗಝಗಿಸುವ
> ತಾರೆಯಾಗಿದ್ದ ಜೈನ ಮತವು ಈಗ ಉಲ್ಕೆಯಂತೆ ಗಗನದಿಂದ
> ಉರಿದು ಬೀಳುತ್ತ ತಂದುಕೊಂಡ ಚಾರಿತ್ರಿಕ ಛಿದ್ರತೆಯನ್ನು

ತಡೆಯಲು ಸಾಧ್ಯವಾಗಲಿಲ್ಲ. ಬಹುಶಃ ವಸಾಹತುಶಾಹಿ ಆಧುನಿಕತೆಯು ಅದನ್ನು ಮತ್ತಷ್ಟು ಚೂರುಮಾಡಿತು. ಇದನ್ನು ದೇವಚಂದ್ರ ದಾಖಲಿಸುತ್ತಾನೆ. ಜೈನ ಮತವು ಕಂಡ ಶೈಥಿಲ್ಯದ ತಾರ್ಕಿಕ ಕೊನೆ ಎಂದರೆ, ಜೈನಧರ್ಮ ಬಿಟ್ಟು ಹೋಗುವುದಲ್ಲ; 'ಅಲ್ಲಾಖುದಾ' ಎಂಬ ಹೊಸ ಮತವನ್ನೇ ಹುಟ್ಟುಹಾಕುವುದು. ಪಾರ್ಶ್ವಭಟ್ಟಾರಕ ಎಂಬುವವನು ಇಂತಹ ಹೊಸಮತ ಹುಟ್ಟುಹಾಕುತ್ತಾನೆ. ಇದೇ ಕತೆಯನ್ನು ಆಧರಿಸಿ ದೇವಚಂದ್ರನ ಸಮಕಾಲೀನನಾದ ಚಂದ್ರಸಾಗರವರ್ಣಿ 'ಮುಲ್ಲಾ ಶಾಸ್ತ್ರ' ಎಂಬ ಕೃತಿಯನ್ನೇ ಬರೆದನು. ಇದು ಜೈನರ ಇಸ್ಲಾಮೀಕರಣ ಅಥವಾ ಸೂಫೀಕರಣ ಪ್ರಕ್ರಿಯೆಯೇ? ಭಟ್ಕಳದ ಜೈನರು ಇಸ್ಲಾಮನ್ನು ಸ್ವೀಕರಿಸಿದ್ದನ್ನು ರಾಜಾವಳಿ ಹೀಗೆ ರೂಪಕಾತ್ಮಕವಾಗಿ ಹೇಳುತ್ತಿದೆಯೇ? (ಭಟ್ಕಳದ ಈಗಿನ ನವಾಯುತ ಮುಸ್ಲಿಮರು ಹಿಂದೆ ಜೈನರಾಗಿದ್ದವರು.) ಮುಖ್ಯವೆಂದರೆ ರಾಜಾವಳಿ ಕಥೆಯು ಕರ್ನಾಟಕದ ಧಾರ್ಮಿಕ ಸಾಮರಸ್ಯ ಸಮನ್ವಯಗಳ ಬಗ್ಗೆ ೨೦ನೇ ಶತಮಾನದ ಕರ್ನಾಟಕ ಸಂಸ್ಕೃತಿ ಚಿಂತಕರು ನೀಡುವ ಗ್ರಹಿಕೆಗಳನ್ನು ಛಿದ್ರಮಾಡುತ್ತದೆ.[೨]

ಹೀಗೆ ಭಾರತದ ಮುಸಲ್ಮಾನರು ಸ್ಥಳೀಯ ಪರಂಪರೆಗಳ ಜೊತೆ ಬೆರೆಯುತ್ತಾ ಬದುಕಿದ್ದಾರೆ. ಬಾಬಾಬುಡನ್‌ಗಿರಿ, ಹಿಂದೂ ಮುಸ್ಲಿಮರೆಲ್ಲರೂ ಬೆರೆತು ಆಚರಿಸುವ ಉರುಸ್‌ಗಳು ಈ ಬಗೆಯ ಬೆರೆಯುವಿಕೆಯಿಂದ ನಿರ್ಮಾಣಗೊಂಡಂಥವೇ.

ನಮ್ಮ ನಡುವೆ ಹಲವು ಧರ್ಮ, ಜಾತಿಗಳಿವೆ. ಆಚರಣೆ, ನಂಬಿಕೆಗಳಿವೆ. ಸಾಮರಸ್ಯವನ್ನು ಕಾಣಬೇಕಾದದ್ದು ಈ ವೈವಿಧ್ಯತೆಯಲ್ಲೇ. ಎಲ್ಲರನ್ನು ಓಡಿಸಿ ಹಿಂದೂ ರಾಷ್ಟ್ರವನ್ನು ನಿರ್ಮಿಸುತ್ತೇವೆಂಬುದೇ ಹುಸಿ. ಬಹು ಸಂಸ್ಕೃತಿಯ ನಾಡಿನಲ್ಲಿ ಭಾಷೆ, ಧರ್ಮ, ದೇವರು, ನಂಬಿಕೆ ಎಲ್ಲವೂ ಒಂದೇತೆರನಾಗಿರಬೇಕೆಂಬ ಮಾತೇ ಅಹಂಕಾರದ್ದು.

ಕೋಮುಗಳ ನಡುವಿನ ಪರಸ್ಪರ ಹಿಂಸೆ ಮತ್ತು ಪ್ರತ್ಯೇಕತೆಗಳು ಆಧುನಿಕ ಪಕ್ರಿಯೆಯಲ್ಲ. ಪ್ರಾಚೀನ ಭಾರತದ ದಾಯಾದಿ ಹಿಂಸೆಯಿಂದಲೇ ಇದಕ್ಕೆ ವಿಸ್ತಾರವಾದ ನೆಲೆ ಇದೆ ಎಂಬುದನ್ನು ಕೆ.ವಿ. ಸುಬ್ಬಣ್ಣ ಹೇಳುತ್ತಾರೆ. ಅಲ್ಲದೆ ನಮಗೆ ಪರಿಚಯ ಇರುವವರಲ್ಲೇ ಅವರ ಮತ್ತು ನಮ್ಮ ಆಲೋಚನೆ ಮತ್ತು ನಡವಳಿಕೆಗಳಲ್ಲಿನ ಭಿನ್ನತೆಯು ಕಾರಣಕ್ಕಾಗಿ, ಅವರು ನಮಗೆ ಹೇಗೆ ಅಹಿತಕಾರಿಗಳಾಗಿ ಕಾಣುತ್ತಾರೆಂಬುದನ್ನು ಮನಗಾಣಿಸುತ್ತಾರೆ. ಇನ್ನೂ ಮುಂದೆ ಸಾಗುವ ಸುಬ್ಬಣ್ಣನವರು ನಮ್ಮ ಕುಟುಂಬದಲ್ಲೇ ಇಲ್ಲದಿರುವ ಸಾಮರಸ್ಯದ ಬಗೆಗೆ ಮಾತನಾಡುತ್ತಾ ಹಿಂಸೆ, ಪ್ರತ್ಯೇಕತೆ, ಭಿನ್ನತೆ ಹೇಗೆ ಭಾರತೀಯ ಜೀವನ ಕ್ರಮದಲ್ಲೇ ಅಥವಾ ಮಾನವನ ನಿತ್ಯ ಬದುಕಿನಲ್ಲೆ ಹರಡಿಕೊಂಡಿದೆ ಎಂಬುದನ್ನು ವಿವರಿಸುತ್ತಾರೆ.[೩] ಇದು ನಮ್ಮ ಪ್ರತಿ ಕ್ಷಣದ ಆಲೋಚನಾ ಸರಣಿಯಿಂದ ಹೊಮ್ಮುವ ಭಿನ್ನತೆ ಎಂದು

ಹೇಳುವ ಸೂಕ್ಷ್ಮರೂಪಿಯಾದ ವಿವರಣೆ.

ಭಾರತದ ಮನಸ್ಸು ಯಾವುದಾದರೂ ಒಂದು ಬಗೆಯ ಅಸಮಾನತೆಯನ್ನು ನಿರ್ಮಿಸಿಕೊಳ್ಳಲು ಯತ್ನಿಸುತ್ತಲೇ ಇರುತ್ತದೆ. ಒಂದುವೇಳೆ ಹಿಂದುತ್ವವಾದಿಗಳ ಕನಸಿನಂತೆ ಭಾರತದ ಎಲ್ಲ ಮುಸಲ್ಮಾನರನ್ನು ಗಡಿಪಾರು ಮಾಡಿದರೂ, ಹಿಂದುತ್ವ ಎನ್ನುವ ಕಲ್ಪಿತಕುಲ ತೆಳುವಾಗಿ, ಮತ್ತೆ ಅದರೊಳಗೆ ಜಾತೀಯತೆಯ ಹೊಸ ಆವೃತ್ತಿ ತಲೆ ಎತ್ತಲಾರಂಭಿಸುತ್ತದೆ. ಒಂದೇ ಜಾತಿಯಲ್ಲಿಯೂ ಹಲಬಗೆಯ ತರತಮಗಳಿವೆ ಎಂಬುದನ್ನು ಗಮನಿಸಿದರೆ ಭಾರತಕ್ಕೆ ಈ ಅಸಮಾನ್ಯತೆಯ ಗೀಳು ಎಂಥದೆಂಬುದು ಹೊಳೆಯದೆ ಇರದು. ಹೀಗೆ ತರತಮ ರಚನೆಯೇ ತನ್ನ ಸ್ವರೂಪ ಎಂಬುದನ್ನು ಅರಿತು ಭಾರತ ಮುಸಲ್ಮಾನರ ಬಗೆಗಿರುವ ಹುಸಿ ಅತೃಪ್ತಿ, ದ್ವೇಷಗಳನ್ನು ತೊಡೆದುಕೊಳ್ಳಬೇಕಾಗಿದೆ. ನಾವು ಅನ್ಯಮತೀಯರಿಂದಲೇ ಹಾಳಾಗಿದ್ದೇವೆ, ನಮ್ಮ ಪಾರಂಪರಿಕ ದಿವ್ಯತೆಯನ್ನು ಕಳೆದುಕೊಂಡಿದ್ದೇವೆ, ನಾವು ಅನ್ಯರಿಂದ ಇಂದು ಕೊಳೆಯಾಗಿದ್ದೇವೆ ಎಂದು ಭ್ರಮಿಸುವುದು ಎಷ್ಟು ಅಸಮಂಜಸವಲ್ಲವೇ? ಮತಧರ್ಮದ ಕಾರಣಗಳಿಲ್ಲದಿದ್ದರೆ ಮತ್ಯಾವುದೊ ಕಾರಣಕ್ಕೆ ಮಲಿನವಾಗುತ್ತೇವೆ. ಇಲ್ಲಿ ಕೆ.ವಿ. ಸುಬ್ಬಣ್ಣನವರ ಈ ಮಾತು ಮುಖ್ಯ ಅನ್ನಿಸುತ್ತದೆ: 'ಗಾಂಧಿ ಯಾವತ್ತೋ ಹೇಳಿದ್ದ–ಈ ಶರೀರ ದಿನವೂ ತಾನಾಗಿಯೇ ಕೊಳೆಯಾಗುತ್ತಿರುತ್ತದೆ ಮತ್ತು ಅದನ್ನು ನಾವು ದಿನಾ ತೊಳೆದುಕೊಳ್ಳುತ್ತಲೇ ಇರಬೇಕು ಅಂತ. ಅದು ಈ ಜಗತ್ತು ಮತ್ತು ಜೀವಿಗಳ ವಿಧಿ. ಅದಕ್ಕೆ ಕೊನೆಯಿಲ್ಲ. ಭಿನ್ನತೆಗಳೂ ಅಸಹನೆಯೂ ಅನಾದ್ಯನಂತ. ಅದನ್ನು ಮನಗಂಡು, ಅರಿತು, ಮನದಟ್ಟು ಮಾಡಿಕೊಂಡು ಅದಕ್ಕೆ ಹೊಂದಿಸಿಕೊಳ್ಳುವ ಕುಶಲತೆಯನ್ನು ಕಲಿಯಬೇಕಿದೆ. ಅಸಹನೆಯನ್ನು ಸಹಿಸಿಕೊಳ್ಳಬೇಕು. ಸಹಿಸಿ ತನ್ನನ್ನು ಬಾಳಿಸಿಕೊಳ್ಳಬೇಕು.......ದನ ಹುಲಿಗಳು ಮುಖಾಮುಖಿಯಾಗಲೇಬೇಕು. ಧೈರ್ಯಮಾಡಿ ದನ ಹುಲಿಗಳು ಭೆಟ್ಟಿಯಾಗುವ ಅಮೃತ ಕ್ಷಣದ ಮಿಂಚಿನಲ್ಲಿ ಜೀವ ವಿವೇಕ ಸ್ಫೋಟಿಸುತ್ತದೆ'.[೪]

ದೇಸೀ ನೆಲೆಗಳಲ್ಲಿ ಹಿಂದೂ–ಮುಸಲ್ಮಾನ ಸಂಸ್ಕೃತಿಗಳು ಪರಸ್ಪರ ಕೊಳುಕೊಡುಗೆಯ ಸಂಪರ್ಕದಲ್ಲಿದ್ದವು. ಇದು ಶುದ್ಧ ಧಾರ್ಮಿಕತೆ ಇದ್ದಾಗ ಸಾಧ್ಯವಾಗುವಂಥದ್ದು, ಮತೀಯ ಸ್ಪರ್ಶಗಳಿಂದ ಇದು ಅಧಾರ್ಮಿಕಗೊಂಡು, ರಾಜಕೀಕರಣವಾಗುತ್ತಾ ಸಾಗಿದಂತೆ ಹಳೆಯ ಸಾಮರಸ್ಯ ತನ್ನ ಹರಿವನ್ನು ನಿಲ್ಲಿಸಿ ಕೊಳೆಯಲಾರಂಭಿಸಿತು. ಹಳೆಯ ಸಾಮರಸ್ಯ ಘಟ್ಟದ ಕೊಡುಕೊಳೆಯನ್ನು ಕೆ.ವಿ. ಸುಬ್ಬಣ್ಣ ಹೀಗೆ ಗುರುತಿಸಿದ್ದಾರೆ:

> ಹಿಂದು ಮುಸ್ಲಿಂ ಸಂಸ್ಕೃತಿಗಳ ಕೂಟದಲ್ಲಿ ಹಲವು ಶಾಸ್ತ್ರಗಳು ಬೆಳೆದುಕೊಂಡವು. ಔತ್ತರೇಯ ಸಂಗೀತ, ಹಲವು ನೃತ್ಯ ಪ್ರಕಾರಗಳು, ಉದ್ಯಾನ ಕಲೆ, ವಾಸ್ತುಶಿಲ್ಪ, ಮುಂತಾದವು, ಲಖನವಿ ಎಂದು ಗಣ್ಯವಾದ ನಯವಂತಿಕೆಯ ನಾಗರಿಕತೆ–ಇತ್ಯಾದಿಗಳಲ್ಲಿ ಈ ಸಾಮರಸ್ಯದ ಫಲ ಕಾಣುತ್ತದೆ. ದಕ್ಷಿಣದಲ್ಲಿ ಬಹಮನಿ ಆಡಳಿತ

ಕಾಲದಲ್ಲಿ ಮತ್ತು ಅನಂತರ ಇಂಥ ಸಾಮರಸ್ಯದ ಪ್ರಕ್ರಿಯೆ ಮತ್ತೂ ಆಳವಾದ ಜನಪದ ಸ್ತರಗಳಲ್ಲಿ ನಡೆಯಿತು. ಮೊದಲು ದಖ್ಖಣಿ ಎನಿಸಿಕೊಂಡು ಬೆಳೆದ ಉರ್ದುಭಾಷೆ, ಅದರ ಕಾವ್ಯ ಮುಂತಾದುವಾಗಲಿ, ನಮ್ಮ ಆಡಳಿತ ವ್ಯವಸ್ಥೆ ವಾಸ್ತುಗಳಲ್ಲೂ ಜಾನಪದ ಕಾವ್ಯ-ರಂಗಭೂಮಿಗಳಲ್ಲೂ ಆ ಕಾಲಕ್ಕೆ ಮೂಡಿದ ಹೊಸ ರೂಪಗಳಾಗಲಿ ಅಥವಾ ಧರ್ಮಮೂಲವಾಗಿದ್ದೂ ಧಾರ್ಮಿಕ ಭಿನ್ನತೆಯನ್ನು ತೊಡೆದು ಹಾಕಿದ ದರ್ಗಾಗಳಂಥ ಜನಪದ ಸಂಸ್ಥೆಗಳಾಗಲಿ ಈ ಪ್ರಕ್ರಿಯೆಯ ಅವಶೇಷ ಸಾಕ್ಷಿಗಳು. ಖಾದರ್ ಲಿಂಗವೆಂಬ ಕಲ್ಪನೆ, ಶಿಶುನಾಳ ಶರೀಫನಂಥ ಕವಿ ಈ ಪ್ರಕ್ರಿಯೆಯ ಅಸಾಧಾರಣ ಫಲ. ಯಾವತ್ತೂ ಮಾನವ ಕುಲ ತಲೆಯಲ್ಲಿ ಮುಡಿದು ಬೀಗಿಕೊಳ್ಳಬಹುದಾದ ಚಂದದ ಹೂ ಅದು."[7]

ಮುಸಲ್ಮಾನರು ಹಿಂದುಗಳ ಉಜ್ವಲ ಚರಿತ್ರೆಯನ್ನು ಹಾಳುಮಾಡಿದರು, ದೇವಾಲಯಗಳನ್ನು ಧ್ವಂಸ ಮಾಡಿದರು, ಮಂದಿರ ಉರುಳಿಸಿ ಮಸೀದಿ ಕಟ್ಟಿಸಿದರು- ಈ ಬಗೆಯ ಅಸಮಾಧಾನಗಳು ಕೋಮುಭಾವನೆಗಳನ್ನು ತೀವ್ರಗೊಳಿಸುತ್ತಿವೆ. ಒಂದು ರಾಷ್ಟ್ರೀಯ ಪ್ರಭುತ್ವವಿಲ್ಲದ, ರಾಜ, ಸಾಮಂತರು ಪುಟ್ಟ ಪುಟ್ಟ ಪಾಳೇಪಟ್ಟುಗಳನ್ನು ಆಳುತ್ತಿದ್ದ ಕಾಲದಲ್ಲಿ ಪರಸ್ಪರ ಆಕ್ರಮಣ, ಅತಿಕ್ರಮಣ, ಗೆಲುವು ಸೋಲು ತೀರ ಸಹಜ. ಮುಸಲ್ಮಾನರೂ ಕೂಡ ಎಲ್ಲರಂತೆ ಎರಗಿಬಿದ್ದಿದ್ದಾರೆ, ಸೋತುಸತ್ತಿದ್ದಾರೆ, ಗೆದ್ದು ಬಾಳಿದ್ದಾರೆ. ಎಲ್ಲರಂತೆ ಅವರೂ ಚರಿತ್ರೆಯ ಚಲನೆಯಲ್ಲಿ ಸರಿ, ತಪ್ಪುಗಳನ್ನು ಮಾಡಿದ್ದಾರೆ. ಚರಿತ್ರೆಯಲ್ಲಿ ವೈಷ್ಣವರು, ಶೈವರು, ಜೈನರು, ಬೌದ್ಧರು, ವೀರಶೈವರ ನಡುವೆ ಎಷ್ಟು ಪರಸ್ಪರ ಅತಿಕ್ರಮಣಗಳಾಗಿಲ್ಲ? ಹಿಂಸೆ ಪ್ರತಿಹಿಂಸೆ ನಡೆದಿಲ್ಲ? ಎಲ್ಲವೂ ಚರಿತ್ರೆಯ ಕಾಲಮೇಲೆ ಸಹಜ ಎನ್ನುವಂತೆ ನಡೆದುಹೋಗಿವೆ. ಈ ಅಸಮಾಧಾನಗಳು ಹಿಂದೂ ಧರ್ಮದೊಳಗಿನ ಜಾತಿ ವ್ಯವಸ್ಥೆಯೊಳಗೂ ತಳಕು ಹಾಕಿಕೊಂಡಿವೆ. ಆದರೆ ಮುಸ್ಲಿಮರ ಕುರಿತಾದ ಅಸಹನೆ ಮಾತ್ರ ಗಾಢವಾಗಿ ಕಾಣಿಸುತ್ತಿದೆ. ಇದನ್ನು ತೆಳುಗೊಳಿಸಬೇಕಾಗಿದೆ. ಇದೆಲ್ಲವನ್ನು ಮರೆಯಬೇಕಾಗಿದೆ. ವರ್ತಮಾನವನ್ನು ಭೂತದ ನೆನಪುಗಳಿಂದ ಪಾರುಮಾಡಲು ಡಿ. ಆರ್. ನಾಗರಾಜ್ ಹೇಳುವ 'ಮಹಾ ಮರೆವು' ನಮ್ಮನ್ನು ಆವರಿಸಬೇಕಿದೆ.[8] ಭೂತವನ್ನು ಕರೆದು ಕೆರಳಿಸಿಕೊಂಡಿರುವ ನಮಗೆ ಈ ಮರೆವೇ ಸ್ವಾಸ್ಥ್ಯವನ್ನು, ಸಾಮರಸ್ಯದ ಹೊಸ ನೋಟ ಕ್ರಮವನ್ನು, ಬದುಕನ್ನು ದಕ್ಕಿಸಿಕೊಡಬಲ್ಲದು.

ವಿಶ್ವದ ಬೇರೆ ಬೇರೆ ಕಡೆಯ ಮುಸ್ಲಿಮರ ಮೂಲಕ ಭಾರತದ ಮುಸ್ಲಿಮರನ್ನು ಅರ್ಥೈಸಿಕೊಳ್ಳುವ ಕ್ರಮವನ್ನು ಬಿಡಬೇಕಿದೆ. ಪಾಕಿಸ್ತಾನದ ಮುಸ್ಲಿಮರ ಕಾರ್ಯಚಟುವಟಿಕೆಗಳು, ಚಿಂತನಾಕ್ರಮಗಳನ್ನು ಗ್ರಹಿಸುವುದಕ್ಕಿಂತ ಭಿನ್ನವಾಗಿ ಭಾರತದ ಮುಸ್ಲಿಮರನ್ನು ಗ್ರಹಿಸಬೇಕಿದೆ. ಬಹುಕಾಲದಿಂದ ಭಾರತದ ಬಹುರೂಪಿ ಸಾಂಸ್ಕೃತಿಕ ನೆಲೆಗಳಲ್ಲಿ ಬಾಳಿ ಬಂದ ಇಲ್ಲಿನ

ಮುಸ್ಲಿಮರು, ಪಾಕಿಸ್ತಾನದಂಥ ಅಥವಾ ಇನ್ನಿತರೆ ಮುಸ್ಲಿಂ ಮೂಲಭೂತವಾದ ಬಲವಾಗಿರುವ ರಾಷ್ಟಗಳಲ್ಲಿನ ಮುಸ್ಲಿಮರಿಗಿಂತ ಭಿನ್ನ ಎಂದು ಅರಿಯಬೇಕಿದೆ. ರಹಮತ್ ತರೀಕೆರೆ ಹೇಳುವಂತೆ 'ಮೂಲಭೂತವಾದಿಗಳೂ, ಸರ್ವಾಧಿಕಾರಿಗಳೂ, ದುಷ್ಟ ರಾಜಕಾರಣಿಗಳೂ ಇರುವ ಪಾಕಿಸ್ತಾನದಂಥ ದೇಶ, ನೆರೆದೇಶವಾಗಿರುವುದಂತೂ ಭಾರತದ ಮುಸ್ಲಿಮರ ಮೇಲೆ ದೊಡ್ಡ ಭಾರವಾಗಿದೆ'.[೭] 'ಪಾಕಿಸ್ತಾನ ಎಂದರೆ ಏನು?' ಎನ್ನುವ ಲೇಖನದಲ್ಲಿ ಡಿ.ಆರ್. ನಾಗರಾಜ್ 'ಪಾಕಿಸ್ತಾನ ಎನ್ನುವುದು ಭಾರತಕ್ಕೆ ಒಂದು ರಾಷ್ಟ್ರೀಯ ವ್ಯಸನವಾಗಿ ಉಳಿದುಬಿಟ್ಟಿದೆ. ಪಾಕಿಸ್ತಾನಕ್ಕೂ ಹಾಗೆಯೇ, ಭಾರತ ಅದಕ್ಕೆ ರಾಷ್ಟ್ರೀಯ ವ್ಯಸನ. ಹೀಗಾಗಿ ಇವೆರಡು ನಿದ್ರೆ ಎಚ್ಚರಗಳಲ್ಲಿ, ಕನಸು ವಿಚಾರಗಳಲ್ಲಿ ಪರಸ್ಪರ ದ್ವೇಷಿಸುತ್ತಿರುತ್ತವೆ' ಅನ್ನುತ್ತಾರೆ.[೮] ಇದನ್ನು ಕೊಂಚ ವಿಸ್ತರಿಸುವುದಾದರೆ ಪಾಕಿಸ್ತಾನ ರಾಷ್ಟ್ರೀಯ ವ್ಯಸನವಾಗಿರುವುದು ಹಿಂದುತ್ವವಾದಿಗಳಿಗೆ ಮಾತ್ರ. ಇವರಿಗೆ ಪಾಕಿಸ್ತಾನ ಮಾತ್ರವಲ್ಲ ಭಾರತದ ಮುಸ್ಲಿಂ ಸಮುದಾಯವೂ ರಾಷ್ಟ್ರೀಯ ವ್ಯಸನವೇ. ಹಾಗೆಯೇ ಪಾಕಿಸ್ತಾನದ ಎಲ್ಲ ಜನತೆಗೂ ಭಾರತ ವ್ಯಸನವಲ್ಲ. ಪಾಕಿಸ್ತಾನದ ಮೂಲಭೂತವಾದಿತನಗಳನ್ನು, ಅಮೆರಿಕಾದ ಸಾಮ್ರಾಜ್ಯಶಾಹಿ ನೀತಿಗಳನ್ನು ಧಿಕ್ಕರಿಸುವ ಜನದನಿ ಅವುಗಳ ಮಡಿಲಲ್ಲೇ ಮೊಳೆಯುತ್ತಿವೆ ಎಂಬುದನ್ನು ನಾವು ಸುಲಭವಾಗಿ ಮರೆಯಬಾರದು.

ನೂರಾರು ವರ್ಷಗಳಿಂದ ಇಲ್ಲೆ ಹುಟ್ಟಿ ಬೆಳೆದು ಮಣ್ಣಾಗುವ ಮುಸಲ್ಮಾನನನ್ನು ಈ ನೆಲದವನು ಅಂದುಕೊಳ್ಳದ ಹಿಂದುತ್ವವಾದಿಗಳ ಮನಸ್ಥಿತಿ ಕೋಮು ಸಾಮರಸ್ಯಕ್ಕೊಂದು ಬಹು ದೊಡ್ಡ ತೊಡಕಾಗಿದೆ.

ಮತೀಯವಾದಿಗಳು ಹಾಗೂ ಮೂಲಭೂತವಾದಿಗಳಿಂದ ಪಾರಾಗಲು ನಾವು ನಿಜವಾದ 'ಧಾರ್ಮಿಕ'ರಾಗಬೇಕಿದೆ. ತನ್ನ ತತ್ವಾದರ್ಶಗಳಲ್ಲಿ ನಂಬಿಕೆ, ಇತರರ ದರ್ಶನಗಳ ಬಗೆಗೆ ಸಹನೆ ಇದ್ದು ತಾನೂ ಬದುಕಿ, ಇತರರನ್ನೂ ಬದುಕಗೊಡುವ ಆಧ್ಯಾತ್ಮಿಕ ಸ್ಪರ್ಶವುಳ್ಳ ಧಾರ್ಮಿಕತೆ ಇದು. ಇದಕ್ಕೆ ರಾಜಕಾರಣದ ಸೋಂಕು ಹತ್ತದಂತೆ ನೋಡಿಕೊಳ್ಳಬೇಕಿದೆ. ಮತೀಯವಾದಕ್ಕೂ ಧಾರ್ಮಿಕತೆಗೂ ವ್ಯತ್ಯಾಸವಿರುವುದು ಇಲ್ಲೆ. ರಾಜಕೀಕರಣಗೊಂಡ ಧಾರ್ಮಿಕತೆಯೇ ಮತೀಯವಾದ. ಅದು ಹಿಂದುತ್ವವಾದವೇ ಇರಬಹುದು ಅಥವಾ ಮುಸ್ಲಿಂ ಮೂಲಭೂತವಾದವಿರಬಹುದು. ಹೀಗೆ ಯೋಚಿಸುವುದಾದರೆ ಹಿಂದುತ್ವ ವಾದಿಗಳಾಗಲಿ, ಮುಸ್ಲಿಂ ಫಂಡಮೆಂಟಲಿಸ್ಟರಾಗಲಿ ನಿಜವಾದ ಧಾರ್ಮಿಕರಲ್ಲವೇ ಅಲ್ಲ. ಧರ್ಮವನ್ನು ಲೋಕಾತೀತವಾಗಿ ಕಾಣದೆ, ಇಹದ ರಾಜಕೀಯ ಅಸ್ತಿತ್ವಕ್ಕಾಗಿ ಅಪ್ಪಿಕೊಳ್ಳುವ ಈ ಮತೀಯವಾದಿಗಳು ಹಿಂಸಾವಾದಿಗಳು. ರಾಮಕೃಷ್ಣ ಪರಮಹಂಸ, ವಿವೇಕಾನಂದ ನಿಜವಾದ ಧಾರ್ಮಿಕರು. ಆದರೆ ಮತೀಯವಾದಿಗಳು ಇಂಥವರನ್ನೇ ತಮ್ಮ ಮತಾಂಧತೆಯ ಪ್ರತಿನಿಧಿಯನ್ನಾಗಿ ಬಿಂಬಿಸತೊಡಗಿದ್ದಾರೆ. ಗಾಂಧಿಯೂ ಕೂಡ ಧಾರ್ಮಿಕ. ಅದಕ್ಕಾಗಿಯೇ ಗಾಂಧಿಯ ರಾಮನಿಗೂ, ಸಂಘಪರಿವಾರದ ಮತೀಯವಾದಿ ರಾಮನಿಗೂ ಅಂತರವಿರುವುದು. ಲಂಕೇಶರು, ಗಾಂಧಿಯನ್ನು ಒಬ್ಬ ಶ್ರೇಷ್ಠ 'ಹಿಂದೂ' ಎಂದು

ಕರೆಯುವುದು ಬಹುಶಃ ಈ ಅರ್ಥದಲ್ಲೇ ಇರಬಹುದು.[೯]

ಲಂಕೇಶರು ಒಮ್ಮೆ ತಮ್ಮ ಊರಿನ ದೇವಸ್ಥಾನವನ್ನು ದುರಸ್ತಿ ಮಾಡಿಸಬೇಕೆಂದುಕೊಂಡುದರ ಬಗೆಗೆ 'ಟೀಕೆ-ಟಿಪ್ಪಣಿ'ಯಲ್ಲಿ ಬರೆದಾಗ ಕೆಲವು ಹುಸಿ ಕಮ್ಯುನಿಷ್ಟರು ಲಂಕೇಶರ ವೈಚಾರಿಕತೆಯನ್ನು ಪ್ರಶ್ನಿಸಿದ್ದಾಗಿ ದಾಖಲಿಸುತ್ತಾ 'ದೇವಸ್ಥಾನಗಳು ಕಂದಾಚಾರಿಗಳು ಸೇರಿಕೊಳ್ಳುವ ಸ್ಥಳಗಳಲ್ಲ, ಊರ ಸಂಭ್ರಮದ ಜಾಗಗಳು' ಎನ್ನುತ್ತಾರೆ.[೧೦] ದೇವಸ್ಥಾನಗಳಲ್ಲಿ, ಹರಿಕಥೆಗಳ ಮೂಲಕ ಭಾರತದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳವಳಿ ಹಾಗೂ ಕಮ್ಯುನಿಸ್ಟ್ ಚಳವಳಿಗಳನ್ನು ಕಂದಾಚಾರಿ ಚಳವಳಿ ಎಂದು ಹೀಯಾಳಿಸಿದ ಎಂ.ಎನ್. ರಾಯ್‌ಗೆ, 'ಭಾರತದಲ್ಲಿ ನಡೆಯುತ್ತಿರುವುದು ಸರಿ' ಎಂದ ಲೆನಿನ್ ಮಾತನ್ನು ಲಂಕೇಶರು ಉದಾಹರಿಸುತ್ತಾರೆ.[೧೧] ನಾನು ಈ ಮೇಲೆ ವಿವರಿಸಿದ ರೀತಿಯಲ್ಲಿ ಧಾರ್ಮಿಕರಾಗುವುದರ ಅರ್ಥ ಇದೇ. ಲೋಹಿಯಾ ಕೂಡ ಮತ್ತೊಂದು ಸಂದರ್ಭದಲ್ಲಿ ಲಕ್ಷಾಂತರ ಮಂದಿ ಒಂದೆಡೆ ಸೇರುವ 'ತೀರ್ಥಸ್ಥಳಗಳನ್ನು ಶುಚಿಗೊಳಿಸಬೇಕು, ಪರಿಶುದ್ಧವಾಗಿಡಬೇಕು, ಇದರಿಂದ ಲಕ್ಷಾಂತರ ಮಂದಿ ಪ್ರತಿವರ್ಷ ನಿರ್ಮಲವಾದ ಬದುಕನ್ನು ನಡೆಸುವುದು ಹೇಗೆ ಎಂಬುದನ್ನು ನೋಡಬಲ್ಲರು. ನಮ್ಮ ತೀರ್ಥಸ್ಥಳಗಳು ಸುಂದರವಾಗಿ, ಶುಚಿಯಾಗಿ, ಪವಿತ್ರವಾಗಿ ಇರಬೇಕೆಂದು ನನ್ನಂತಹವನು ಹೇಳುತ್ತಿದ್ದೇನೆ' ಎನ್ನುತ್ತಾರೆ.[೧೨] ದೇವಸ್ಥಾನಗಳು, ಧರ್ಮ ತಮ್ಮ ಮೂಲ ಸತ್ವವನ್ನು ಕಳೆದುಕೊಂಡಿದ್ದೇ ಅವುಗಳ ಬಗೆಗೆ ಪ್ರಗತಿಪರರಿಗಿರುವ ಸಿನಿಕತನದಿಂದ. ಇದನ್ನು ಡಿ.ಆರ್. ನಾಗರಾಜ್ ಹೀಗೆ ಗುರುತಿಸಿದ್ದಾರೆ: 'ಸಾಂಸ್ಕೃತಿಕ ಅಧಿಕೃತತೆ ಮತ್ತು ಬೇರುಗಳು ಕೂಡಿಕೊಳ್ಳಬೇಕಾದರೆ ಪ್ರಗತಿಶೀಲ ಶಕ್ತಿಗಳು ಕೂಡಾ ತಮ್ಮ ಚಿಂತನೆ ಮತ್ತು ಭಾವನೆಯ ನೆಲೆಗಳನ್ನು ಪೂರ್ಣವಾಗಿ ಪರಿಷ್ಕರಿಸಬೇಕಿದೆ. ಗಾಂಧಿ, ಅಂಬೇಡ್ಕರ್, ಲೋಹಿಯಾ ತಮ್ಮ ಚಿಂತನೆಯಲ್ಲಿ ಹೇಳಿದ್ದೇ ಚಾರಿತ್ರಿಕ ಬದಲಾವಣೆಯಲ್ಲಿ ಸಂಸ್ಕೃತಿ ಮತ್ತು ಆಧ್ಯಾತ್ಮಿಕತೆಗಿರುವ ಪ್ರಾಮುಖ್ಯತೆಯನ್ನು. ಪ್ರಗತಿಶೀಲರು ಸಂಸ್ಕೃತಿ ಮತ್ತು ಧರ್ಮಗಳ ಪ್ರಶ್ನೆಯನ್ನು ಕಡೆಗಣಿಸಿದ್ದರಿಂದ ಅವು ಉಡಾಳ ಸಾಧುಗಳ ಕೈಯಲ್ಲಿನ ತ್ರಿಶೂಲಗಳಾದವು. ಅಗ್ನಿಭಕ್ಷಕ ರಾಜಕಾರಣಿಗಳ ಕೈಯ ಮಾರಕಾಸ್ತ್ರವಾದವು. ಆಧುನಿಕ ಸೆಕ್ಯುಲರ್ ಶಕ್ತಿಗಳಿಗೆ ನಮ್ಮ ಸಂಸ್ಕೃತಿಯ ಅಂತಃ ಸತ್ವದಿಂದಲೇ ಮರಳಿ ಜೀವ ತುಂಬಬೇಕಾಗಿದೆ. ಧರ್ಮ ಸಂವಾದದ ಪ್ರಾರಂಭಿಕ ನೆಲೆ ಇದೇ ಆಗಿದೆ'.[೧೩]

ಹೀಗೆ ನಿಜವಾದ ಧಾರ್ಮಿಕರೂ ಅಲ್ಲದ ಮತೀಯವಾದಿಗಳು, ಮೂಲಭೂತ ವಾದಿಗಳು ಯಾವತ್ತೂ ಧರ್ಮವನ್ನು ರಾಜಕೀಕರಣಗೊಳಿಸಿಕೊಂಡೇ ಬರುತ್ತಾರೆ. ಈ ಕಾರಣದಿಂದ ಅಧಿಕಾರದ ನೆಲೆಗಳಲ್ಲಿ ತೇಲಾಟಮೇಲಾಟಗಳಿಗೆ ಏನಾದರೂ ಒಂದು ಸಾಧನ, ಮಾನದಂಡ ಬೇಕೇಬೇಕು. ಇಂಥವರಿಗೆ ರಾಜಕೀಕರಣಗೊಂಡ ಧರ್ಮ ಶಕ್ತಿಯುತ ಆಯುಧ. ಅದಕ್ಕಾಗಿ ಅಧಿಕಾರದ ನೆಲೆಗಳಲ್ಲಿ ಮತೀಯ ಸಾಮರಸ್ಯವನ್ನು ಹುಡುಕುವುದೇ ದುಃಸಾಧ್ಯ: ಅದೇನಿದ್ದರೂ ಸಾಮಾನ್ಯ ಜನಜೀವನದ ಬಾಳಿನ ಲಯದೊಳಗೇ ಅಂತರಗಂಗೆಯಾಗಿ ಹರಿಯುತ್ತಿದೆ. ಈ ಅಂತರಗಂಗೆಯಿಂದ ನಮ್ಮ ಸಾರ್ವಜನಿಕ ಜೀವನದ

ಮತೀಯ ಕ್ಷೋಭೆಯನ್ನು ಶಮನಗೊಳಿಸಿಕೊಳ್ಳಬೇಕಿದೆ. ಮತೀಯತೆಯ ಕೊಳಕು ಹಳ್ಳ ಈ ಅಂತರಗಂಗೆಗೆ ಸೇರಿಕೊಳ್ಳುವ ಮೊದಲು ಮತೀಯ ಸಾಮರಸ್ಯ ಬಯಸುವವರೆಲ್ಲರೂ ಜನಸಮುದಾಯದ ನಿಜ ಧಾರ್ಮಿಕತೆಗೂ, ನಂಬಿಕೆಗೂ, ಆಳುವ ವರ್ಗಗಳ ಹುನ್ನಾರಗಳಿಗೂ ಸ್ಪಷ್ಟವಾದ ಗೆರೆಕೊರೆಯಬೇಕಿದೆ. ನಿರ್ದಿಷ್ಟ ಮತದ ಮತಾಂಧನ ಯೋಚನಾಸರಣಿಯ ಮೂಲಕ ಇಡೀ ಸಮುದಾಯವನ್ನು ಅರಿವ ಕ್ರಮವನ್ನು ತ್ಯಜಿಸಬೇಕಿದೆ.

ಅಕ್ಷರ ಪರಂಪರೆ ಇರುವ ಸಾಂಸ್ಥಿಕ ಅಥವಾ ಕ್ಲಾಸಿಕಲ್ ಧರ್ಮ ಹಾಗೂ ಬರಹರೂಪಿಯಲ್ಲದ ಜನಪದ ಅಥವಾ ದುಡಿವ ವರ್ಗದ, ಶ್ರಮ ಸಂಸ್ಕೃತಿಯಿಂದ ರೂಪುಗೊಂಡ ಧರ್ಮ ಎಂದು, ಸಾಮರಸ್ಯದ ಚಹರೆಗಳನ್ನು ಹುಡುಕುವಾಗ ರಹಮತ್ ತರೀಕೆರೆ ವಿಭಾಗಿಸಿಕೊಳ್ಳುತ್ತಾರೆ.[೧೪] ಪರಸ್ಪರ ಕೊಡುಕೊಳೆ ಇರುವ ಶ್ರಮಸಂಸ್ಕೃತಿಯ ಜನ ತನ್ನದನ್ನು ನಂಬುತ್ತಾ, ಪರರ ನಂಬಿಕೆಗಳನ್ನೂ ಆತುಕೊಳ್ಳುತ್ತಾ ಬಾಳಿ ಬಂದಿದ್ದಾರೆ. ಬಹು ನಂಬಿಕೆ, ಆಚರಣೆಗಳಲ್ಲಿ ಹಂಚಿಹೋಗಿರುವ ಹಿಂದೂಗಳು ಎಲ್ಲ ಪಂಗಡ, ಧರ್ಮಗಳ ದೇವರಿಗೆ ಭಕ್ತಿ, ಪ್ರೀತಿಯನ್ನು ತೋರಿ, ಕರುಣೆಯನ್ನು ಬೇಡುತ್ತಾರೆ. ತಮ್ಮ ಮಕ್ಕಳಿಗೆ ಬಂದ ರೋಗಗಳಿಗಾಗಿ, ತಮ್ಮ ಬಾಳಿನಲ್ಲಿ ಆವರಿಸಿರುವ ಸಂಕಷ್ಟಗಳ ನಿವಾರಣೆಗಾಗಿ ಹನುಮಂತನಿಂದ ತಾಯತ ಪಡೆಯಲು ಹಾತೊರೆವವರು, ಮಸೀದಿಯ ಎದುರೂ ಸಾಲುಗಟ್ಟಿ ನಿಲ್ಲುವ ಚಿತ್ರ ನಮ್ಮ ಶ್ರಮ ಸಂಸ್ಕೃತಿಗಳಲ್ಲಿ ಇದೆ. ರಹಮತ್ ತರೀಕೆರೆ ಚಲನಶೀಲತೆ ಇರುವುದು ಈ ಬರಹರೂಪಿಯಲ್ಲದ ಪರಂಪರೆ ಕಾಯ್ದುಕೊಂಡ ಧರ್ಮದಲ್ಲೇ ಎನ್ನುತ್ತಾ, ಅನ್ಯದೈವಕ್ಕೆರಗುವುದು ಇಂಥ ಶ್ರಮ ಸಂಸ್ಕೃತಿಗಳಲ್ಲಿ ಮಾತ್ರ ಸಾಧ್ಯ ಎಂಬಂಥ ಗ್ರಹಿಕೆಗಳನ್ನು ಹೀಗೆ ನೀಡುತ್ತಾರೆ:

> ಜನಸಮುದಾಯಕ್ಕೆ ತಮ್ಮ ನಂಬಿಕೆಯ ದೈವವೊಂದಿದ್ದರೂ ಮತ್ತೊಂದರ ಬಗ್ಗೆ ಸೆಳೆತವಿದೆ. ಕರ್ನಾಟಕದ ಪಿಂಜಾರರಿಗೂ ಮತ್ತು ಜಮಾತೆ ಇಸ್ಲಾಮಗಳಿಗೂ ಇರುವ ವ್ಯತ್ಯಾಸವಿದು. ಕರ್ನಾಟಕದ ಪಿಂಜಾರರು ಮುಸ್ಲಿಮರಾದರೂ ಅವರ ಭಾಷೆ, ಉಡುಪು, ಪೂಜಿಸುವ ದೈವಗಳು ಮತಾಂತರವಾಗುವ ಮುಂಚಿನವು. 'ಶುದ್ಧ' ಧರ್ಮ ಕಾಣಬಯಸುವವರಿಗೆ ಇವು ಅಸಹನೆ ಹುಟ್ಟಿಸುತ್ತವೆ. ಕರ್ನಾಟಕದ ಅನೇಕ ಗ್ರಾಮದೇವತೆಗಳು ತಮ್ಮ ಪರಿಸರದ ಸೂಫಿ ಸಂತರನ್ನು ಅಣ್ಣ ತಮ್ಮ ಎಂದು ಕರೆದುಕೊಳ್ಳುತ್ತವೆ. 'ಅನ್ಯ' ದೈವಗಳನ್ನು ಅಣ್ಣ ತಮ್ಮ ತಂಗಿಯರ ಸಂಬಂಧದಲ್ಲಿ ಕಾಣುವ ಈ ನಿಲುವು ಆ ದೇವತೆಗಳದ್ದಲ್ಲ, ಜನರದ್ದು. ಜನರಿಗೆ ಧರ್ಮವು ಬಳಕೆಯಿಂದ ಆತ್ಮೀಯ. ಜನಸಮುದಾಯಕ್ಕೆ ದೈವವು ದಂಡಾಧಿಕಾರಿಯಲ್ಲ. ಬಂಧು ಸಂಬಂಧ ಬೆಳೆಸಲು ಇಲ್ಲಿ ಜಾತಿಧರ್ಮದ ಗೋಜಲುಗಳು ಕಡಿಮೆ. ಸೂಫಿಸಂತರ ಸಮಾಧಿಗಳಲ್ಲಿ ನಡೆಯುವ ಉರುಸುಗಳಿಗೆ ಈಗಲೂ

'ಗಂಧ' ಅಥವಾ 'ಪರುಸಬಟ್ಟಲು' 'ಹಿಂದೂ'ಗಳ ಮನೆಯಿಂದ ಬರುತ್ತಿದೆ. ಒಡೆಯರು, ಪೀರರು, ಸಂತರು, ದಾಸಪ್ಪ, ಜೋಗಪ್ಪಗಳು ಸಮುದಾಯ ಮತ್ತು ದೈವಗಳ ನಡುವೆ ಬರುತ್ತಾರಾದರೂ, ಅವರು ಪುರೋಹಿತಶಾಹಿಗಳಲ್ಲ. ಸಮುದಾಯದ ನಂಬಿಕೆಗಳು ಇಷ್ಟೊಂದು ಮಾನವೀಯವಾಗಿ ಉದಾರವಾಗಿರುವುದರಿಂದಲೇ, ಇಂಡಿಯಾದ ಮೊಹರಂ ಆಚರಣೆಗಳು 'ಹಿಂದೂ ಮುಸ್ಲಿಂ' ಸಮುದಾಯಗಳ ಆಡುಂಬೊಲಗಳಾಗಿವೆ. ಈಗಲೂ ಕನ್ನಡದಲ್ಲಿರುವ ಮೊಹರಂ ಹಾಡುಗಳಲ್ಲಿ ದುಡಿವ ವರ್ಗಗಳು, ಪರಿಶಿಷ್ಟ ಸಮುದಾಯಗಳು 'ಅನ್ಯ' ದೇಶದ, 'ಅನ್ಯ' ಮತದ ಚರಿತ್ರೆ-ಪುರಾಣಗಳಿಗೆ, ಅವುಗಳೊಳಗಿನ ಮನುಷ್ಯರ ದುಃಖಕ್ಕೆ ಆಳವಾಗಿ ಮಿಡಿದಿರುವುದು ಗೊತ್ತಾಗುತ್ತದೆ.....ಸಮುದಾಯಗಳು 'ಧಾರ್ಮಿಕ'ವಾಗಿವೆ. ಮತೀಯವಾಗಿಲ್ಲ. ಅವುಗಳ ಮನಸ್ಸಿನೊಳಗೆ ಮತ್ತೊಂದನ್ನು ಉದಾರವಾಗಿ ಸ್ವೀಕರಿಸುವ ಆರೋಗ್ಯಕರ ಮನಸ್ಸಿದೆ. ಬಹುಧರ್ಮ-ಬಹುಸಂಸ್ಕೃತಿಗಳಿರುವ ದೇಶದಲ್ಲಿ ಈ ಸ್ವೀಕರಣ ಮನೋಭಾವವು ಬಹುದೊಡ್ಡ ಮೌಲ್ಯವಾಗಿದೆ.[೧೫]

ಈ ಘಟ್ಟದಲ್ಲಿ ಕೋಮುವಾದಕ್ಕೆ ಉತ್ತರವಾಗಿ ಬಳಸುತ್ತಿರುವ 'ಸೆಕ್ಯುಲರಿಸಂ' ಎಂಬುದನ್ನು ಸರಿಯಾಗಿ ಅರ್ಥೈಸಿಕೊಳ್ಳಬೇಕಿದೆ. ಈ ಸಂದರ್ಭದಲ್ಲಿ ಅನಂತಮೂರ್ತಿಯವರು ಹೇಳುವ ಈ ಮಾತು ಮುಖ್ಯ: 'ಮತ ಮತ್ತು ಧರ್ಮ ಎಂಬ ಶಬ್ದಗಳನ್ನು ನಾವು ತಪ್ಪಾಗಿ ಪ್ರಯೋಗಿಸುತ್ತಿದ್ದೇವೆ. ಲೋಕದೃಷ್ಟಿಯಲ್ಲಿ ಸಹಜವಾಗಿ ಸೆಕ್ಯೂಲರ್ ಆಗಿರುವ ಸಾಮಾನ್ಯ ಜನರಾದ ಹಿಂದೂಗಳು ಬಳಸುವ ಭಾಷೆಗಳಲ್ಲಿ ವಿಪರ್ಯಾಸವೆಂದರೆ, ಅವರ ಈ ಸಹಜ ಸ್ಥಿತಿಯನ್ನು ಹೇಳುವ 'ಸೆಕ್ಯುಲರ್' ಎಂಬ ಶಬ್ದವೇ ಇಲ್ಲ. ಆದ್ದರಿಂದ ಧರ್ಮ ನಿರಪೇಕ್ಷತೆ ಎಂದುಬಿಡುತ್ತೇವೆ. ಧರ್ಮ ಎಂಬುದು ಬಹು ವಿಚಿತ್ರವಾದ-ನಮ್ಮದು ಮಾತ್ರವಾದ (ಭಾರತ) ಶಬ್ದ. ಇರುವ ಸತ್ಯಗಳನ್ನು ಕಾಣಿಸುವ ಶಬ್ದವದು. ಇಂಗ್ಲಿಷ್‌ನ ರಿಲಿಜನ್ ಎಂಬ ಶಬ್ದಕ್ಕೆ 'ಮತ' ಎಂಬ ಶಬ್ದವನ್ನು ಬಳಸಬಹುದಾದರೆ ಮತನಿರಪೇಕ್ಷ ಎನ್ನಬಹುದು. ಸೆಕ್ಯೂಲರ್ ಎಂದರೆ ಮತ ನಿರಪೇಕ್ಷತೆಯೇ ವಿನಃ ಧರ್ಮನಿರಪೇಕ್ಷತೆಯಲ್ಲ-ಯಾಕೆಂದರೆ ಧರ್ಮ ಅಪೇಕ್ಷೆಗೆ ಅತೀತವಾದದ್ದು'.[೧೬]

ಅಂದರೆ 'ಧಾರ್ಮಿಕ'ವಾಗುವುದು ನಮ್ಮ ಒಳಗಿನ ಹಂಬಲ. ಹೀಗೆ 'ಧಾರ್ಮಿಕ'ವಾಗುತ್ತಾ ಸಾಮರಸ್ಯವನ್ನು ಕಾಣುವ ನೆಲೆಗಳನ್ನು ಈ ಹಿಂದೆ, ಕೆ.ವಿ. ಸುಬ್ಬಣ್ಣ, ಪಿ. ಲಂಕೇಶ್, ಡಿ.ಆರ್. ನಾಗರಾಜ್ ಹಾಗೂ ರಹಮತ್ ತರೀಕೆರೆಯವರ ಚಿಂತನೆಗಳಲ್ಲಿ ಕಂಡಿದ್ದೇವೆ. 'ಸೆಕ್ಯುಲರಿಸಂ' ಅನ್ನು ಮತನಿರಪೇಕ್ಷತೆ ಎಂದು ಅರ್ಥೈಸಿಕೊಳ್ಳುವುದಾದರೆ ನಿಸ್ಸಂಶಯವಾಗಿ ಸದ್ಯದ ಕೋಮುವಾದಕ್ಕೆ 'ಸೆಕ್ಯುಲರಿಸಂ' ದಿವ್ಯೌಷದ. ಇನ್ನಾದರೂ ಪಶ್ಚಿಮದ ಧರ್ಮದ

ಕಲ್ಪನೆಗೂ, ಭಾರತದ ಧರ್ಮದ ಕಲ್ಪನೆಗೂ ಇರುವ ವ್ಯತ್ಯಾಸವನ್ನು ಸ್ಪಷ್ಟಪಡಿಸಿಕೊಳ್ಳಬೇಕಿದೆ. ಹೀಗೆ 'ಧಾರ್ಮಿಕ'ರಾಗುತ್ತಾ ಮತನಿರಪೇಕ್ಷತೆಯು ಕಡೆಗೆ ಸಾಗುವುದು ಸವಾಲಿನದೂ ಹೌದು.

ನಟರಾಜ್ ಹುಳಿಯಾರ್ 'ಇಂಡಿಯಾದಲ್ಲಿ ಇವತ್ತು ರಾಜಕೀಯವನ್ನೂ ಧರ್ಮವನ್ನು ಬೇರ್ಪಡಿಸಬಹುದೆ?' ಎಂದು ಪ್ರಶ್ನಿಸಿಕೊಂಡು, ಭಾರತದಲ್ಲಿ ಯಾವತ್ತೂ ಧರ್ಮ ಮತ್ತು ರಾಜಕೀಯಗಳು ಬೇರೆ ಬೇರೆಯಾಗಿರಲೇ ಇಲ್ಲ ಎನ್ನುತ್ತಾರೆ. ಬಸವಣ್ಣ, ಗಾಂಧಿಯಂಥವರಿಗೆ ಧರ್ಮ ಮತ್ತು ರಾಜಕೀಯ ಬೇರೆ ಬೇರೆಯಲ್ಲ ಎಂದು ವಿವರಿಸುತ್ತಾರೆ. ಇಂದು ಧರ್ಮ ಕೋಮುವಾದಿಗಳ ಕರಾಮತ್ತಿನಿಂದ ರಾಜಕೀಕರಣಗೊಂಡು ಮತವಾಗಿದೆ. ಹಳೆಯ ರಾಜಧರ್ಮವನ್ನು, ಎಲ್ಲರನ್ನು ಸಹಿಸಿಕೊಳ್ಳುವ ಬದುಕಿ, ಬದುಕಗೊಡುವ ಭಾರತವನ್ನು ಪುನರ್ ಕಟ್ಟುವುದು ನಮ್ಮ ಸವಾಲಾಗಿದೆ. ಅದಕ್ಕೆ ಹುಳಿಯಾರ್‌ಗೆ ಕಂಡ ದಾರಿ ಇದು: 'ಅಶೀಶ್ ನಂದಿಯವರು ಹೇಳುವಂತೆ ಇವತ್ತಿನ ಇಂಡಿಯಾ ತನ್ನ ಆಧುನಿಕಪೂರ್ವ ಇಂಡಿಯಾದಿಂದ ಕೂಡ ಸಹಬಾಳ್ವೆಯ ಪಾಠ ಕಲಿಯಬೇಕಾಗಿದೆ. ಬಸವಣ್ಣ, ಕಬೀರ, ಷರೀಫ, ಗಾಂಧಿ ಇವರೆಲ್ಲಾ ಆಳವಾದ ಧಾರ್ಮಿಕ ನಿಷ್ಠೆಯನ್ನಿಟ್ಟುಕೊಂಡೇ ಜಾತ್ಯತೀತರಾಗಿದ್ದವರು. ರೇಮಾಂಡೊ ಪಣಿಕ್ಕರ್ ಹೇಳುತ್ತಾರೆ : ನಿಜವಾದ ಮಿಸ್ಟಿಕ್‌ಗೆ ನಿಜವಾದ ಸೆಕ್ಯುಲರ್ ಮನುಷ್ಯನೊಬ್ಬ ಚೆನ್ನಾಗಿ ಅರ್ಥವಾಗುವುದು. ಒಬ್ಬ ರಸೆಲ್, ಒಬ್ಬ ಷರೀಫ ಅಥವಾ ಒಬ್ಬ ತುಕಾರಾಮನ ನಡುವೆ ಬಾಬ್ರಿಮಸೀದಿ ರಾಮ ಜನ್ಮಭೂಮಿಯ ವಾದವೇ ಇರುವುದಿಲ್ಲ'.[೧೭]

## ಕೊನೆ ಟಿಪ್ಪಣಿಗಳು

೧. ಕುವೆಂಪು, 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ', ಸಂ: ಕೆ.ಸಿ. ಶಿವಾರೆಡ್ಡಿ, ಕುವೆಂಪು ಸಮಗ್ರ ಗದ್ಯ, ೨೦೦೪, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಪುಟ: ೬೭.
೨. ರಹಮತ್ ತರೀಕೆರೆ, 'ರಾಜಾವಳಿ ಕಥೆ ಹಾಗೂ ಕರ್ನಾಟಕದ ಪ್ರಪಂಚ', ಕತ್ತಿಯಂಚಿನ ದಾರಿ, ೨೦೦೬, ಬೆಂಗಳೂರು: ಅಭಿನವ ಪ್ರಕಾಶನ, ಪುಟ: ೧೦೫.
೩. ಕೆ.ವಿ. ಸುಬ್ಬಣ್ಣನವರ 'ಗುಜರಾತ್ ಸ್ವಗತ' ಲೇಖನದ ಗ್ರಹಿಕೆಗಳು. ಸಂ: ಟಿ.ಪಿ. ಅಶೋಕ, ಅರೆಶತಮಾನದ ಅಲೆ ಬರಹಗಳು, ೨೦೦೪, ಹೆಗ್ಗೋಡು: ಅಕ್ಷರ ಪ್ರಕಾಶನ.
೪. ಅದೇ, ಪುಟ: ೧೩೪.
೫. ಕೆ.ವಿ. ಸುಬ್ಬಣ್ಣ; 'ಭೂತದ ಸವಾಲಿಗೆ ನಮ್ಮ ಜವಾಬು', ಸಂ: ಟಿ.ಪಿ. ಅಶೋಕ, ಅರೆಶತಮಾನದ ಅಲೆ ಬರಹಗಳು, ೨೦೦೪, ಹೆಗ್ಗೋಡು: ಅಕ್ಷರ ಪ್ರಕಾಶನ.
೬. ಡಿ.ಆರ್. ನಾಗರಾಜ್ ತಮ್ಮ 'ಸಂಸ್ಕೃತಿ ಕಥನ'ದಲ್ಲಿ 'ಲೆಬನಾನ್‌ನ ದುರಂತ' ಎಂಬ ಲೇಖನದಲ್ಲಿ ಲೆಬನಾನ್ ತನ್ನ ಜನಾಂಗ ಹಿಂಸೆಯ ಅರಾಜಕತೆಯಿಂದ ಮುಕ್ತವಾಗಲು ಅದಕ್ಕೆ ಮಹಾಮರೆವು ಬೇಕಾಗಿದೆ ಎನ್ನುತ್ತಾ, ನಿದ್ದೆಯೇ ಅದಕ್ಕೆ ದಿವ್ಯೌಷಧ ಎನ್ನುತ್ತಾರೆ.
೭. ರಹಮತ್ ತರೀಕೆರೆ, 'ಕೋಮುವಾದ: ಮುಖಾಮುಖಿ ಹೇಗೆ?', ಸಂ: ಬಿಸ್ಲೇಹಳ್ಳಿ ಪ್ರಭು, ಎಚ್.ಆರ್. ಸ್ವಾಮಿ, ಮಾನವತೆಯ ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಪುಟ: ೧೮೨.
೮. ಡಿ.ಆರ್. ನಾಗರಾಜ್, 'ಪಾಕಿಸ್ತಾನ ಎಂದರೆ ಏನು?' ಸಂ: ಅಗ್ರಹಾರ ಕೃಷ್ಣಮೂರ್ತಿ, ಸಂಸ್ಕೃತಿ ಕಥನ, ೨೦೦೨, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಪುಟ: ೪೨೬

೯. ಪಿ. ಲಂಕೇಶ್, 'ಧರ್ಮದ ಗಂಧವಿಲ್ಲದವರು', ಟೀಕೆ- ಟಿಪ್ಪಣಿ: ಹತ್ತೊವರೆ ವರ್ಷದ ಕೆಲವು ಬರಹಗಳು, ೧೯೯೧, ಬೆಂಗಳೂರು: ಪತ್ರಿಕೆ ಪ್ರಕಾಶನ.

೧೦. ಅದೇ, 'ಗ್ರಾಮ ದೇವರ ಎದುರು' ಎಂಬ ಲೇಖನ.

೧೧. ಅದೇ.

೧೨. ಲೋಹಿಯಾ ರಾಮ ಮನೋಹರ, 'ಧರ್ಮ- ಕೆಲವು ಮುಖಗಳು', ಅನು: ಉಮಾ ಸರಸ್ವತಿ, ಸಂ: ಕಾಳೇಗೌಡ ನಾಗವಾರ, ನಟರಾಜ್ ಹುಳಿಯಾರ್, ಉತ್ತರ ದಕ್ಷಿಣ, ೧೯೯೬, ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ.

೧೩. ಡಿ.ಆರ್. ನಾಗರಾಜ್, 'ಬೋಧಿವೃಕ್ಷ ನಡೆಸಿದ ಧರ್ಮ ಸಂವಾದ ಕುರಿತು', ಸಂ: ಅಗ್ರಹಾರ ಕೃಷ್ಣಮೂರ್ತಿ, ಸಂಸ್ಕೃತಿ ಕಥನ, ೨೦೦೨, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಪುಟ: ೧೮೦

೧೪. ರಹಮತ್ ತರೀಕೆರೆ, 'ಮರದೊಳಗಣ ಕಿಚ್ಚು', ೨೦೦೨, ಬೆಂಗಳೂರು: ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಪುಟ: ೨೩೧-೨೩೨.

೧೫. ಅದೇ.

೧೬. ಯು.ಆರ್. ಅನಂತಮೂರ್ತಿ, 'ಮತ, ಧರ್ಮ ಇತ್ಯಾದಿ....', ವಾಲ್ಮೀಕಿಯ ನೆವದಲ್ಲಿ, ೨೦೦೬, ಬೆಂಗಳೂರು: ಅಭಿನವ ಪ್ರಕಾಶನ, ಪುಟ: ೧೧೮.

೧೭. ನಟರಾಜ್ ಹುಳಿಯಾರ್, 'ಹಳೆಯ ದೇವರುಗಳೆಲ್ಲ ಸತ್ತು.....', ಮತೀಯವಾದದ ಮುಖಗಳು, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ.

## ಅಧ್ಯಾಯ ೮

## ಕೊನೆಯದಾಗಿ : ಕೋಮುವಾದಕ್ಕೆ ಇಷ್ಟೇ ಮುಖಗಳೆ?

ಆಧುನಿಕ ಕನ್ನಡ ಸಂಸ್ಕೃತಿ ಚಿಂತನೆಯು ಕೋಮುವಾದವನ್ನು ಹೇಗೆ ಗ್ರಹಿಸಿದೆ ಎಂಬುದನ್ನು ಅರಿಯುವುದು ನನ್ನ ಈ ಅಧ್ಯಯನದ ಮುಖ್ಯ ಉದ್ದೇಶ. ಕೋಮುವಾದದ ವಿಮರ್ಶೆಯು ಕೆಲವು ಮಾದರಿಗಳನ್ನು ಕಂಡುಕೊಳ್ಳಬೇಕಿತ್ತು. ಅಂದರೆ ಕೋಮುವಾದದ ಬಗೆಗೆ ಹೊಮ್ಮಿರುವ ಕನ್ನಡ ಚಿಂತನೆ, ಇತರೆ ಚಿಂತನೆಗಳಿಗಿಂತ ಅಥವಾ ಅಖಿಲ ಭಾರತೀಯ ಮಾದರಿಗಳಿಗಿಂತ ಹೇಗೆ ಭಿನ್ನ ಎಂದು ಅರಿಯುವುದು ಎಂದರ್ಥವಲ್ಲ. ಕನ್ನಡ ಸಂಸ್ಕೃತಿ ತನ್ನ ಸಮಕಾಲೀನ ಬಿಕ್ಕಟ್ಟೊಂದಕ್ಕೆ ಎದುರಾದ ಕ್ರಮವನ್ನು ಗ್ರಹಿಸುವುದು ಇಲ್ಲಿನ ಮುಖ್ಯ ಉದ್ದೇಶ. ಅದರ ಜೊತೆಯಲ್ಲಿ ಈ ಅಧ್ಯಯನದ ಸಂದರ್ಭದಲ್ಲಿ ಅಖಿಲ ಭಾರತದ ಮಾದರಿಗಳಿಗಿಂತ ಭಿನ್ನವಾಗಿ ಕನ್ನಡ ಚಿಂತನೆ ತನ್ನ ಪರಂಪರೆ, ಸಂಸ್ಕೃತಿ ಹಾಗೂ ದೇಸೀ ನೆಲೆಗಳ ವಿಶೇಷ ತಾಣಗಳಲ್ಲಿ ಭಿನ್ನ ಅಥವಾ ವಿಶೇಷ ಎನ್ನುವಂಥ ಚಿಂತನಾಕ್ರಮಗಳನ್ನು ನಿರ್ಮಿಸಿದೆ ಎಂಬುದನ್ನು ಗುರುತಿಸಲು ಯತ್ನಿಸಿದೆ. ಕೆ.ವಿ. ಸುಬ್ಬಣ್ಣ ಸಾಮರಸ್ಯವನ್ನು ಗುರುತಿಸುವ ಜನಪದ ವಿವೇಕ, ರಹಮತ್ ತರೀಕೆರೆ ಹೇಳುವ ಬರಹ ಪರಂಪರೆಯಲ್ಲದ ಶ್ರಮ ಸಂಸ್ಕೃತಿಗಳು, ಅವುಗಳು ಅನ್ಯದೈವಕ್ಕೆರಗುವ ಸಾಧ್ಯತೆಗಳು ಕಂಡಿರುವುದು ಈ ತಾಣಗಳಲ್ಲೇ. ಉಳಿದಂತೆ ರಾಮ, ಅಯೋಧ್ಯೆ, ರಾಮಸೇತು, ಫ್ಯಾಸಿಸ್ಟ್ ಐಡಿಯಾಲಜಿಯಾಗಿ ಕೋಮುವಾದ, ಹಿಂದುತ್ವವಾದಿಗಳು ನಿರ್ಮಿಸುವ ಆಹಾರ ಸಂಕಥನ– ಇಂಥ ಚಿಂತನೆಗಳು ಅಖಿಲ ಭಾರತೀಯ ಮಾದರಿಗಳೂ ಹೌದು.

ಕೋಮು ಸಂಘರ್ಷಗಳ ಬಗೆಗೆ ಜಿ. ರಾಜಶೇಖರ, ಕೆ. ಫಣಿರಾಜ್, ಪಟ್ಟಾಭಿರಾಮ ಸೋಮಯಾಜಿ ಕ್ಷೇತ್ರಕಾರ್ಯದ ಆಧಾರದ ಮೇಲೆ ನೀಡಿರುವ ವರದಿಗಳು ಹಾಗೂ 'ಲಂಕೇಶ್ ಪತ್ರಿಕೆ' ತೊಂಭತ್ತರ ದಶಕದಲ್ಲಿ ಪ್ರಕಟಿಸಿದ ವರದಿಗಳು, ಗಲಭೆಗಳ ಭೀಕರತೆಯನ್ನು ಹತ್ತಿರದಿಂದ ಕಂಡು, ಅವುಗಳಲ್ಲಿ ನೊಂದವರು, ಬೆಂದವರು, ಕಿಡಿ ಹೊತ್ತಿಸಿ ದೂರ ನಿಂತು ನಲಿದವರನ್ನು ದಾಖಲಿಸಿವೆ. ಇದು ಕನ್ನಡ ಸಂಸ್ಕೃತಿ ಚಿಂತನೆ ಮಾಡಿದ ಮುಖ್ಯ ಕೆಲಸ.

ಸಾಮ್ರಾಜ್ಯಶಾಹಿಗಳು ರೂಪಿಸುವ ಎಲ್ಲ ತಂತ್ರಗಾರಿಕೆಗಳನ್ನೂ ಕೋಮುವಾದ ಮೈಗೂಡಿಸಿಕೊಂಡಿದೆ. ಜಾಗತೀಕರಣವು ವಸಾಹತುವಾದದ ಹೊಸ ಆವೃತ್ತಿಯಾದ್ದರಿಂದ ವಸಾಹತುಕಾರರಿಂದಲೇ ಬದುಕುವ ಕಲೆಯನ್ನು ಕರಗತ ಮಾಡಿಕೊಂಡಿರುವ ಕೋಮುವಾದಕ್ಕೂ, ಜಾಗತೀಕರಣಕ್ಕೂ ಸಂಬಂಧವಿದೆ. 'ಭಾರತದಲ್ಲಿ ಕೋಮುವಾದವು ಬೃಹದಾಕಾರವಾಗಿ ಬೆಳೆಯಲಾರಂಭಿಸುವುದು ಜಾಗತೀಕರಣವು ಶುರುವಾದ ದಿನಗಳಿಂದಲೇ ಯಾಕೆ?' ಎಂಬ ರಹಮತ್ ತರೀಕೆರೆಯವರ ಪ್ರಶ್ನೆ ಮುಖ್ಯವಾದದ್ದು.[೧]

ಕೋಮುವಾದ ಮತ್ತು ಮಹಿಳೆ, ಕೋಮುವಾದ ಮತ್ತು ದಲಿತರು, ಕೋಮುವಾದ ಮತ್ತು ಮಾಧ್ಯಮಗಳು, ಕೋಮುವಾದ ಮತ್ತು ಜಾಗತೀಕರಣ–ಇವೆಲ್ಲ ಕ್ಷೇತ್ರಗಳನ್ನು ಕುರಿತಂತೆ ವ್ಯಾಪಕ ಚರ್ಚೆ ನಡೆಯಬೇಕಾಗಿದೆ. ಕೋಮುವಾದಕ್ಕಿರುವ ಸಮಾಜೋ-ಆರ್ಥಿಕ ನೆಲೆಗಳೂ ಮುಖ್ಯ.

ಬಹುಪಾಲು ಕೋಮುಗಲಭೆಗಳಲ್ಲಿ ನಡೆಯುವ ಆಸ್ತಿನಾಶದ ಕ್ರಿಯೆಗಳ ಹಿಂದೆ ಮಾರುಕಟ್ಟೆಯ ಹುನ್ನಾರಗಳೂ ಇವೆ. ಜಿ. ರಾಜಶೇಖರ್ ಮತ್ತು ಕೆ. ಫಣಿರಾಜ್ ಮಾಡಿರುವ ಒಂದು ವರದಿ ಇದೆ. ಅಸೋಡು ಸೂಜಿ ಪ್ರಕರಣವೆಂದೇ ಅದು ಹೆಸರುವಾಸಿ. ೨೦೦೨ ಮಾರ್ಚ್ ೩೦ ರಂದು ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಅಸೋಡು ಗ್ರಾಮದ ನಂದಿಕೇಶ್ವರ ದೇವಸ್ಥಾನದ ಕಾಲಾವಧಿಯ ಗೆಂಡೆ ಸೇವೆ ನಡೆಯಿತು. ಮಾರನೆಯ ದಿನ ನಡೆದ ಜಾತ್ರೆಯಲ್ಲಿ ಕೆಲ ಮುಸ್ಲಿಂ ತರುಣರು ಹುಡುಗಿಯರಿಗೆ ಸೂಜಿಯಿಂದ ಚುಚ್ಚುತ್ತಿದ್ದಾರೆ, ಅದು ಏಡ್ಸ್ ರೋಗಾಣುಗಳಿರುವ ಸೂಜಿ ಎಂದು ವದಂತಿ ಹರಡಿ ಆ ಯುವಕರನ್ನು ಬಡಿದು ಪೊಲೀಸರಿಗೆ ಒಪ್ಪಿಸಲಾಯಿತು. ಮಾರನೆ ದಿನ ಇದೇ ನೆಪವಾಗಿ ಕುಂದಾಪುರದ ಮುಸಲ್ಮಾನರ ಮೇಲೆ ಭೀಕರ ದಾಳಿಯೇ ನಡೆದುಹೋಯಿತು. ಜಾತ್ರೆಗಳಲ್ಲಿ ಬಳೆ, ಕನ್ನಡಿ, ಆಟದ ಸಾಮಾನು ಮಾರುವ ಅಂಗಡಿಯವರು ಆ ತರುಣರು. ಇಂಥ ಅಂಗಡಿಗಳಿಗೆ ಬರುವವರು ವಸ್ತುಗಳನ್ನು ಸುಮ್ಮನೆ ನೋಡಿ, ನೋಡಿ ಇಡುತ್ತಾರೆ. ಕೆಲವು ಮಕ್ಕಳು ಗುಂಪುಗೂಡಿ ಕದಿಯುತ್ತಾರಂತೆ. ಇದನ್ನು ನಿಯಂತ್ರಿಸಲು ಮುಸ್ಲಿಮೇತರರೂ ಸೂಜಿಗಳನಿಟ್ಟುಕೊಂಡು ಮಕ್ಕಳು ದೂರ ಹೋಗಲಿ ಎನ್ನುವ ಉದ್ದೇಶದಿಂದ ಚುಚ್ಚುತ್ತಾರಂತೆ. ಅಂಗಡಿ ಮಾಲೀಕರಾದ ಈ ಮುಸ್ಲಿಂ ತರುಣರು ಮಾಡಿರುವುದೂ ಹಾಗೆಯೇ. ಇದನ್ನೇ ಏಡ್ಸ್ ರೋಗಾಣುಗಳಿರುವ ಸೂಜಿ ಎಂದು, ಅರಾಜಕತೆಗೆ ಕಾಯುತ್ತಿದ್ದ ಮತೀಯವಾದಿಗಳು ಬಿಂಬಿಸಿದ್ದಾರೆ.[೨]

ಕೊನೆಗೆ ಅದು ಏಡ್ಸ್ ರೋಗಾಣುಗಳಿರುವ ಸೂಜಿಯಲ್ಲ ಎಂದು ವೈದ್ಯಕೀಯ ಸಂಶೋಧನೆಗಳು ವರದಿ ನೀಡಿದ ಬಳಿಕ, ಜಾಮೀನಿನ ಮೇಲೆ ಹೊರಬಂದ ಆ ತರುಣರನ್ನು ಕಂಡ ರಾಜಶೇಖರ್, ಫಣಿರಾಜ್ ಅವರಿಗೆ, ಆ ಹುಡುಗರು ಕರಾವಳಿಯ ಇನ್ನ್ಯಾವ ಜಾತ್ರೆಯಲ್ಲೂ ಅಂಗಡಿ ಹಾಕುವುದಿಲ್ಲ ಎಂದು ಹೆದರಿಕೆಯಿಂದ ಹೇಳಿದ್ದಾರೆ.

ಮತೀಯವಾದಿಗಳು ಅವರ ಕಸುಬನ್ನು, ಅನ್ನವನ್ನು ಕಿತ್ತುಕೊಂಡರಲ್ಲವೆ? ಇದು ಅವರ ಪಾಲಿನ ಆರ್ಥಿಕ ನೆಲೆಯನ್ನು ಮುರಿದಂತಲ್ಲವೆ?

ಕೋಮುವಾದಿಗಳ ಧರ್ಮಶುದ್ಧತೆಯ ಆಲೋಚನೆಗಳು, ಹಿಂದೂ ರಾಷ್ಟ್ರದ ಪುನರುತ್ಥಾನ, ಭವ್ಯ ರಾಷ್ಟ್ರೀಯತೆಯ ಹಂಬಲಗಳಿಗೆ ಅನಿವಾಸಿ ಭಾರತೀಯರ ಪ್ರೋತ್ಸಾಹ ಮತ್ತು ಹಣಕಾಸಿನ ನೆರವೂ ಇದ್ದಂತಿದೆ. ಭಾರತದಂಥ ಬಹುಮುಖಿ ಚಹರೆ ಇರುವ, ಅಸಂಖ್ಯ ಕಿರು ಸಮುದಾಯ, ಭಿನ್ನ ಭಾಷೆ, ನಂಬಿಕೆ, ಆಚರಣೆಗಳ ನೆಲೆಗಳಲ್ಲಿ ಹುಟ್ಟಿ, ಇಲ್ಲಿನ ಸತ್ವದಿಂದ ಮೆದುಳು ಬೆಳಸಿಕೊಂಡು, ವಿದೇಶಗಳಲ್ಲಿ ಜೇಬು ತುಂಬಿಸಿಕೊಳ್ಳುತ್ತಿರುವ ಅನಿವಾಸಿ ಭಾರತೀಯರು ದೇಶದ ಹೊರಗೆ ಒಂದು ಬಗೆಯ ಅತಂತ್ರ ಸ್ಥಿತಿಯಲ್ಲಿದ್ದಾರೆ. ದೇಶದ ಒಳಗೆ ಅಸಂಗತವಾಗುವ ರಾಷ್ಟ್ರೀಯತೆ ದೇಶದ ಹೊರಗಿರುವ ಈ ಅತಂತ್ರರಿಗೆ ಒಂದು ಮಾನಸಿಕ ನೆಮ್ಮದಿಯನ್ನು ಕೊಡುತ್ತದೆ. ಇಂಥವರಿಗೆ ಭಾರತದ ಆಂತರಿಕ ರಚನೆಯಲ್ಲಿರುವ ವೈವಿಧ್ಯತೆ, ಅಸಂಖ್ಯ ಕಿರುಸಮುದಾಯಗಳು ಅವುಗಳ ನಂಬಿಕೆ, ದೈವ, ಆಚರಣೆಗಳು ನೆನಪಾಗುವುದಕ್ಕಿಂತ, ಬಹುಬೇಗ ಏಕತ್ರವಾದ ಭಾರತದ ಭೌತಿಕ ಶರೀರ ನೆನಪಾಗುತ್ತದೆ. ಇವರಿಗೆ ಬಸವಣ್ಣ, ಅಲ್ಲಮ, ಅಕ್ಕ, ಷರೀಫರಂಥವರು ನೆನಪಾಗುವುದು ಇನ್ನೂ ನಿಧಾನ. ವಿದೇಶಗಳಲ್ಲಿ ಇವರಿಗಿರುವ ಅಸ್ಮಿತೆ ಭಾರತೀಯರೆಂತಲೇ. ಧರ್ಮ ಮತ್ತು ರಾಷ್ಟ್ರ ಪ್ರಭುತ್ವದ ಮೂಲಕ ವ್ಯಕ್ತಿಯ ಐಡೆಂಟಿಟಿ ಕಾಣುವ ಪಶ್ಚಿಮದವರಿಗೆ ಈ ಅತಂತ್ರರು ಇನ್ಯಾವ ರೀತಿ ಕಂಡಾರು? ಇವರು ಕೋಮುವಾದಿಗಳು ಹೇಳುವ ರಾಷ್ಟ್ರೀಯತೆಯನ್ನು ತಮಗೆ ವಿದೇಶದಲ್ಲೊಂದು ಅಸ್ಮಿತೆ ತಂದಿತ್ತ ರಾಷ್ಟ್ರೀಯತೆ ಎಂದು ಭ್ರಮಿಸಿ, ಮತೀಯವಾದಿಗಳ ಪರವಾಗಿರಬಹುದೇನೋ? 'ಭಾರತವನ್ನು ತೊರೆದು ಹೋದ ಅನಿವಾಸಿ ಭಾರತೀಯರು ತಮ್ಮ ಸಂಸ್ಕೃತಿಯ ಬೇರುಗಳನ್ನು ಜೀವಂತವಾಗಿರಿಸಿಕೊಳ್ಳಲು, ಯು.ಎಸ್., ಯು.ಕೆ., ಕೆನಡಾ, ಆಸ್ಟ್ರೇಲಿಯಾದಲ್ಲಿ ಹರಡಿದ್ದ ವಿ.ಎಚ್.ಪಿ ಘಟಕಗಳ ಮೇಲೆ ತಂದ ಒತ್ತಡದ ಪರಿಣಾಮವಾಗಿ, ಹಿಂದೂ ರಾಷ್ಟ್ರದ ಕಲ್ಪನೆ, ೧೯೮೦ರ ನಂತರ ಅತ್ಯಂತ ಕ್ಷಿಪ್ರವಾಗಿ ವ್ಯಾಪಿಸಲಾರಂಭಿಸಿತು. ಭಾರತದ ಮೇಲ್ವರ್ಗಕ್ಕೆ ಸೇರಿದ ಅನಿವಾಸಿ ಭಾರತೀಯರು, ಇದಕ್ಕಾಗಿ ಎಲ್ಲ ರೀತಿಯ ಬೆಂಬಲವನ್ನು ಒದಗಿಸಿದ್ದರು' ಎಂಬ ಮಾತಿನಲ್ಲಿ ಸತ್ಯ ಇರುವಂತಿದೆ.[೩] ಈ ಸತ್ಯ ಗಾಢ ಅನಿಸಿದ್ದು ಮೊನ್ನೆ. ಹಿಂದುತ್ವ ವಿರೋಧಿಯಾಗಿರುವ, ಸಂಘಪರಿವಾರಗಳನ್ನು ದೂರವಿಡಬೇಕು ಅನ್ನುವ, ಯು.ಆರ್. ಅನಂತಮೂರ್ತಿಯವರ ಮಾತು ಕೇಳಿದ ನಂತರ.[೪] ನಾವೆಲ್ಲ ಹಿಂದೂ ರಾಷ್ಟ್ರವನ್ನು ಪುನರುತ್ಥಾನ ಮಾಡೇ ತೀರುತ್ತೇವೆ ಎಂದು ತ್ರಿಶೂಲ ಹಿಡಿದು ಹೊರಟಿರುವವರನ್ನು ಅನಂತಮೂರ್ತಿಯವರು ವಿರೋಧಿಸುತ್ತಿರುವುದರಿಂದ, ಅನಿವಾಸಿ ಭಾರತೀಯರು, ಅದರಲ್ಲೂ ಮೇಲ್ಜಾತಿಗಳವರು ಅನಂತಮೂರ್ತಿಯವರಿಂದ ಸ್ವಜನ ಹಿತವನ್ನು ಅಂದರೆ ಪ್ರಚ್ಛನ್ನ ಮತೀಯವಾದವನ್ನು ನಿರೀಕ್ಷಿಸುತ್ತಿರುವಂತಿದೆ.

ಹೀಗೆ ಕೋಮುವಾದಕ್ಕೆ ಕನ್ನಡ ಸಂಸ್ಕೃತಿ ಚಿಂತನೆ ಹಲವು ದಿಕ್ಕುಗಳಿಂದ ಸ್ಪಂದಿಸಿದೆ. ನನ್ನ ಕಿರು ಪ್ರಬಂಧ ಆ ಚಿಂತನೆಯ ಕೆಲವೇ ಮಾದರಿಗಳನ್ನು ಹುಡಕಲು ಯತ್ನಿಸಿದೆಯಷ್ಟೆ.

## ಕೊನೆ ಟಿಪ್ಪಣಿಗಳು

೧. ರಹಮತ್ ತರೀಕೆರೆ, 'ಕೋಮುವಾದ: ಮುಖಾಮುಖಿ ಹೇಗೆ?', ಸಂ: ಬಿಸ್ಲೇಹಳ್ಳಿ ಪ್ರಭು, ಎಚ್.ಆರ್. ಸ್ವಾಮಿ, ಮಾನವತೆಯ ತುಡಿತಗಳು, ೨೦೦೪, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್.

೨. ಹೆಚ್ಚಿನ ವಿವರಗಳಿಗೆ ನೋಡಿ: 'ಕೋಮುವಾದದ ವರಸೆಗಳು: ನಾವು ಕಂಡಂತೆ' ಎಂಬ ಲೇಖನ, ಎಸ್.ಆರ್. ಭಟ್, ಜಿ. ರಾಜಶೇಖರ್, ಕೆ. ಫಣಿರಾಜ್, ಕೋಮುವಾದದ ಕರಾಳ ಮುಖಗಳು, ೨೦೦೫, ಬೆಂಗಳೂರು: ನವಕರ್ನಾಟಕ ಪ್ರಕಾಶನ.

೩. ಬಿ.ಯು. ಸುಮ, 'ಕೋಮುವಾದ: ಸಮಸ್ಯೆ ಮತ್ತು ಸವಾಲುಗಳು', 'ಸಂವಾದ' ಮಾಸಪತ್ರಿಕೆ, ವಾರ್ಷಿಕ ವಿಶೇಷಾಂಕ, ಸಂ: ಇಂದೂಧರ ಹೊನ್ನಾಪುರ, ಸಂಪುಟ: ೨, ಸಂಚಿಕೆ: ೩ ಜನವರಿ ೨೦೦೪, ಪುಟ: ೬.

೪. ದಿನಾಂಕ ೪-೧೦-೨೦೦೭ ರಂದು ಅನಂತಮೂರ್ತಿಯವರು ಬಸವನಗುಡಿ ನ್ಯಾಷನಲ್ ಕಾಲೇಜಿನ ಸಭಾಂಗಣದಲ್ಲಿ ತಮ್ಮ 'ಮಾತು ಸೋತ ಭಾರತ' ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಆಡಿದ ಮಾತುಗಳು.

# ಪರಾಮರ್ಶನ ಗ್ರಂಥ ಸೂಚಿ

೧. ಅನಂತಮೂರ್ತಿ ಯು.ಆರ್., ೨೦೦೪, ಯುಗ ಪಲ್ಲಟ-ನಮ್ಮ ಕಾಲದ ತಲ್ಲಣಗಳು, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ.

೨. ಅನಂತಮೂರ್ತಿ ಯು.ಆರ್., ೨೦೦೭, ಋಜುವಾತು, ಬೆಂಗಳೂರು: ಅಂಕಿತ ಪ್ರಕಾಶನ.

೩. ಅನಂತಮೂರ್ತಿ ಯು.ಆರ್., ೨೦೦೭, ವಾಲ್ಮೀಕಿಯು ನೆವದಲ್ಲಿ, ಬೆಂಗಳೂರು: ಅಭಿನವ ಪ್ರಕಾಶನ.

೪. ಅನಂತಮೂರ್ತಿ ಯು.ಆರ್., ೨೦೦೭, ಮಾತು ಸೋತ ಭಾರತ, ಬೆಂಗಳೂರು: ಅಭಿನವ ಪ್ರಕಾಶನ.

೫. ಈಶ್ವರ ಚಂದ್ರ (ಅನು), ೨೦೦೬, ಕೋಮುವಾರು ಸಮಸ್ಯೆ(ಕಾನ್ಪುರ ಗಲಭೆ ವಿಚಾರಣಾ ಸಮಿತಿ ವರದಿ), ಹೊಸ ದೆಹಲಿ: ನ್ಯಾಷನಲ್ ಬುಕ್ ಟ್ರಸ್ಟ್

೬. ಕೃಷ್ಣರಾವ್ ಸಿ.ಆರ್., ೨೦೦೨, ಮೂಲಭೂತವಾದ ಮತ್ತು ಫ್ಯಾಸಿಸಮ್, ಬೆಂಗಳೂರು: ಕೋಮುವಾದಿ ವಿರೋಧಿ ಆಂದೋಲನದ ಪ್ರಕಾಶನ.

೭. ಗಾಂಧಿ ಎಂ.ಕೆ., ೧೯೭೪, ಹಿಂದ್ ಸ್ವರಾಜ್(ಕನ್ನಡಾನುವಾದ), ಬೆಂಗಳೂರು: ಗಾಂಧಿ ಸ್ಮಾರಕ ನಿಧಿ.

೮. ಗೊವಿಂದರಾವ್. ಜಿ.ಕೆ., ೨೦೦೨, ಅಂಯೋಧ್ಯೆ, ಗುಜರಾತ್ ಮತ್ತು ನಾವು, ಬೆಂಗಳೂರು: ಕೋಮುವಾದಿ ವಿರೋಧಿ ಆಂದೋಲನ ಪ್ರಕಾಶನ.

೯. ಗೋವಿಂದರಾವ್. ಜಿ.ಕೆ., ೨೦೦೭, ಬಿಂಬ-ಪ್ರತಿಬಿಂಬ, ಬೆಂಗಳೂರು: ಸುಮುಖ ಪ್ರಕಾಶನ.

೧೦. ಚಂದ್ರಶೇಖರ್.ಎಸ್., ಕನ್ನಡಕ್ಕೆ: ಸಿ. ನಾಗಣ್ಣ, ೨೦೦೦, ದಕ್ಷಿಣ ಭಾರತ: ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೧೧. ಚಂದ್ರಶೇಖರ್.ಎಸ್., ೧೯೯೯, ಸಾಹಿತ್ಯ ಮತ್ತು ಚರಿತ್ರೆ, ತಿಪಟೂರು: ನಮ್ಮ ಪ್ರಕಾಶನ.

೧೨. ತಪನ್ ಬಸು ಮತ್ತು ಇತರರು, ಮಂಗ್ಳೂರ ವಿಜಯ(ಅನು), ೧೯೯೩, ಖಾಕಿ ಚೆಡ್ಡಿ ಕೇಸರಿ ಬಾವುಟ, ಮದ್ರಾಸ್: ಓರಿಯಂಟಲ್ ಲಾಂಗಮನ್ ಪ್ರಕಾಶನ.

೧೩. ನಟರಾಜ್ ಹುಳಿಯಾರ್, ೨೦೦೪, ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತುಪರಂಪರೆ, ಹಂಪಿ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೧೪. ನಾಗರಾಜ್ ಡಿ.ಆರ್., ಸಂ: ಅಗ್ರಹಾರ ಕಷ್ಣಮೂರ್ತಿ, ೨೦೦೨, ಸಂಸ್ಕೃತಿ ಕಥನ, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ.

೧೫. ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು(ಸಂ), ೨೦೦೨, ಮತೀಯವಾದ, ಭಯೋತ್ಪಾದನೆ ಮತ್ತು ಧರ್ಮ, ಸಾಣೆಹಳ್ಳಿ: ಶ್ರೀ ಶಿವಕುಮಾರ ಹವ್ಯಾಸಿ ಕಲಾ ಸಂಘ.

೧೬. ಪಾಂಡೆ ಬಿ.ಎನ್., ಹಸನ್ ನಯೀಂ ಸುರಕೋಡ(ಅನು), ೨೦೦೫, ಹಿಂದೂ ಮಂದಿರಗಳು ಹಾಗೂ ಔರಂಗಜೇಬನ ಆದೇಶಗಳು, ಬಳ್ಳಾರಿ: ಲೋಹಿಯಾ ಪ್ರಕಾಶನ.

೧೭. ಬದರೀನಾಥ್ ಕೆ. ರಾವ್, ೨೦೦೨, ಹಿಂದುತ್ವ ಮತ್ತು ಅಲ್ಪ ಸಂಖ್ಯಾತರು, ಬೆಂಗಳೂರು: ಕೋಮುವಾದಿ ವಿರೋಧಿ ಆಂದೋಲನದ ಪ್ರಕಾಶನ.

೧೮. ಬಿಸ್ಲೇಹಳ್ಳಿ ಪ್ರಭು, ಎಚ್.ಆರ್.ಸ್ವಾಮಿ, ೨೦೦೪, ಮಾನವತೆಯ ತುಡಿತಗಳು, ಮೈಸೂರು: ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್.

೧೯. ಬಾಬಾ–ದತ್ತ ವಿವಾದದ ಸುತ್ತ, ಕರ್ನಾಟಕ ಕೋಮು ಸೌಹಾರ್ದ ವೇದಿಕೆಯ ಅಧ್ಯಯನ ವರದಿ, ೨೦೦೫, ಶಿವಮೊಗ್ಗ.

೨೦. ಭಟ್. ಎಸ್.ಆರ್, ಜಿ. ರಾಜಶೇಖರ್, ಕೆ. ಫಣಿರಾಜ್, ೨೦೦೫, ಕೋಮುವಾದದ ಕರಾಳ ಮುಖಗಳು, ಬೆಂಗಳೂರು: ನವಕರ್ಾಟಕ ಪ್ರಕಾಶನ.

೨೧. ಮಂಗ್ಳೂರ ವಿಜಯ(ಸಂ), ೨೦೦೭, ಸಾಚಾರ್ ವರದಿ ಮತ್ತು ಮುಸ್ಲಿಮರ ಸ್ಥಿತಿಗತಿ, ಬೆಂಗಳೂರು: ಸಾಮಾಜಿಕ ಕ್ರಿಯಾ ಸಮಿತಿ.

೨೨. ಮತೀಯವಾದದ ಮುಖಗಳು, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ.

೨೩. ಮಧು ಲಿಮಯೆ, ಕನ್ನಡಕ್ಕೆ: ಹಸನ್ ನಯೀಂ ಸುರಕೋಡ, ೨೦೦೬, ಅಯೋಧ್ಯೆ ವಿನಾಶಕಾರಿ ವೋಟ್ ಬ್ಯಾಂಕ್, ಬಳ್ಳಾರಿ: ಲೋಹಿಯಾ ಪ್ರಕಾಶನ.

೨೪. ಮಹಿಳೆ ಮತ್ತು ಕೋಮುವಾದ, ೨೦೦೦, ಮಹಿಳಾ ಜಾಗೃತಿಯ ಪ್ರಕಟಣೆ, ಬೆಂಗಳೂರು.

೨೫. ಮುರಾರಿ ಬಲ್ಲಾಳ್. ನಿ., ೨೦೦೪, ಕಿಟಕಿಗಳು ಕನ್ನಡಿಗಳು, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ.

೨೬. ರಂಜಾನ್ ದರ್ಗಾ, ೨೦೦೦, ಅಮೃತ ಮತ್ತು ವಿಷ, ಬಳ್ಳಾರಿ: ಲೋಹಿಯಾ ಪ್ರಕಾಶನ.

೨೭. ರಥಯಾತ್ರೆಯ ರಾಜಕೀಯ, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು ಶೂದ್ರ ಪ್ರಕಾಶನ.

೨೮. ರಹಮತ್ ತರೀಕರೆ, ೨೦೦೨, ಮರದೊಳಗಣ ಕಿಚ್ಚು, ಬೆಂಗಳೂರು: ಬೆಳ್ಳಿ ಚುಕ್ಕಿ ಬುಕ್ ಟ್ರಸ್ಟ್.

೨೯. ರಹಮತ್ ತರೀಕರೆ, ೨೦೦೬, ಕತ್ತಿಯಂಚಿನ ದಾರಿ, ಬೆಂಗಳೂರು: ಅಭಿನವ ಪ್ರಕಾಶನ.

೩೦. ರಾಮ ಜನ್ಮಭೂಮಿ ಹಿಂಸಾಕಾಂಡ, ಸಾಮರಸ್ಯ ಮಾಲೆ, ೧೯೯೧, ಬೆಂಗಳೂರು: ಶೂದ್ರ ಪ್ರಕಾಶನ.

